# ಅಂಗುಲೀಮಾಲ



ಪ್ರಭುಶಂಕರ



ಪ್ರಕಾಶಕರು
ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ
ಕೃಷ್ಣಮೂರ್ತಿಪುರಂ
ಮೈಸೂರು

ಪ್ರಥಮ ಮುದ್ರಣ ೧೯೫೭



ಈ ನಾಟಕವನ್ನು ಅಭಿನಯಿಸ ಬಯಸುವವರು 'ಅಧ್ಯಕ್ಷರು', ಶ್ರೀ ರಾಮಕೃಷ್ಣಾಶ್ರಮ, ಬಸವನಗುಡಿ, ಬೆಂಗಳೂರು—೪, ಅವರಿಗ ಹತ್ತು ರೂಪಾಯಿಗಳನ್ನು ಕಳುಹಿಸಿ ಅಪ್ಪಣೆ ಪಡೆಯಬೇಕು.

ಸಂಪಾದಕರು ಮತ್ತು ಪ್ರಕಾಶಕರು

**ತ. ಸು. ಶಾಮರಾಯ, ಎಂ.ಎ.**

ಬೆಲೆ.

ಸಾಧಾರಣ ಪ್ರತಿ ರೂ. ೧-೦-೦ ಕ್ಯಾಲಿಕೋ ಪ್ರತಿ ರೂ ೨-೦-೦

ಮುದ್ರಕರು·

ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

ಪೂಜ್ಯ ಶ್ರೀ ಸ್ವಾಮಿ ಯತೀಶ್ವರಾನಂದರಿಗೆ

ಗುರು ಯತೀಶ್ವರ ಪಾದಪದ್ಮಕೆ
ಮೊದಲ ತೊದಲಿನ ಕಾಣಿಕೆ,
ಸಲ್ಲುವೀ ನೆಪದಲ್ಲಿ ಕಳೆಯಲಿ
ನನ್ನಹಮ್ಮಿನ ಕಾಳಿಕೆ

# ಅರಿಕೆ

ನನ್ನ ವಿದ್ಯಾರ್ಥಿ ಮಿತ್ರ ಚಿ|| ಪ್ರಭುಶಂಕರನ 'ಅಂಗುಲೀಮಾಲ' ನಾಟಕವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಹರ್ಷವಾಗುತ್ತಿದೆ. ಈ ಅವಕಾಶವನ್ನು ಕಲ್ಪಿಸಿಕೊಟ್ಟುದಕ್ಕಾಗಿ ಅವನಿಗೂ, ಕವಿ ಕರ್ಮವನ್ನು ಕುರಿತು ಜಿಜ್ಞಾಸಾಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿರುವ ಕವಿವರ್ಯ ಪು. ತಿ. ನ. ಅವರಿಗೂ ಹಾರ್ದಿಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ಕೃತಿಗೆ ಒಪ್ಪುವ ಚಿತ್ರವನ್ನು ಬರೆದುಕೊಟ್ಟಿರುವ ಶ್ರೀ ಕೆ. ಬಿ. ಪ್ರಭುಪ್ರಸಾದರಿಗೂ ವಂದನೆಗಳು.

ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ವೆಸ್ಲಿ ಮುದ್ರಣಾಲಯದವರಿಗೆ ನಮ್ಮ ವಂದನೆಗಳು ಮತ್ತು ಅಭಿನಂದನೆಗಳು.

ದುರ್ಮುಖೀ ಸಂ||
ವೈಶಾಖ ಶುಕ್ಲ ಪೂರ್ಣಿಮಾ
ಮೈಸೂರು.

ತ. ಸು. ಶಾಮರಾಯ
ಸಂಪಾದಕ

# ಬಿನ್ನಹ

"ಒಮ್ಮೊಮ್ಮೆ ಈ ಪಾಪಪುಣ್ಯಗಳ ಯೋಚನೆ ಬರುತ್ತದೆ. ನನಗೆ ಅವು ಹಿಡಿಸುತ್ತಿಲ್ಲ. ಮೊದಮೊದಲು ಪಾಪ-ಗೀಪಗಳ ಮತ್ತು ಅವುಗಳಿಂದ ಮುಕ್ತಿ ವಾಗುವುದರ ಕಡೆ ಮನಸ್ಸು ಕೊಡಬೇಕಾಗುತ್ತದೆ. ಆದರೆ ಭಗವಂತನ ಕೃಪೆಯಿಂದ ಆತನಲ್ಲಿ ಪ್ರೀತಿಯುಂಟಾಯಿತು ಎಂದರೆ ಪಾಪ ಪುಣ್ಯ ಎಲ್ಲಾ ಮರೆತೇಹೋಗಿ ಬಿಡುತ್ತದೆ. ಶಾಸ್ತ್ರ ಮತ್ತು ಶಾಸನ ಎಷ್ಟೋ ದೂರದಲ್ಲಿ ಬಿದ್ದುಕೊಂಡಿರುತ್ತವೆ. ಅನುತಾಪ, ಪ್ರಾಯಶ್ಚಿತ್ತ, ಇವುಗಳ ಭಾವನೆಯೇ ಮನಸ್ಸಿನಲ್ಲಿ ಏಳದು.

"ಪಾಪ-ಗೀಪಗಳ ಕಡೆ ಮನಸ್ಸು ಕೊಡುವುದು, ಸೊಟ್ಟಸೊಟ್ಟವಾಗಿ ತಿರುಗಿ ಕೊಂಡಿರುವ ನದಿಯ ಮೂಲಕ ಗುರಿಯನ್ನು ಮುಟ್ಟಿದ ಹಾಗೆ. ಈ ಪ್ರಯತ್ನದಲ್ಲಿ ಬಹಳವಾಗಿ ಕಷ್ಟಪಡಬೇಕಾಗುತ್ತದೆ. ಆದರೆ ಪ್ರವಾಹ ಬಂದು ಎಲ್ಲೆಲ್ಲೂ ನೀರು ತುಂಬಿರುವಾಗ ನೇರವಾಗೇ ಮುಂದುವರಿದು ಅಲ್ಪಸಮಯದಲ್ಲೇ ಗುರಿಯನ್ನು ಮುಟ್ಟಿಬಿಡಬಹುದು. ಆಗ ಎಲ್ಲೆಲ್ಲೂ ಒಂದು ಗಳುವಿನುದ್ದ ನೀರು ನಿಂತಿರುತ್ತದೆ."

ಶ್ರೀ ರಾಮಕೃಷ್ಣ ಪರಮಹಂಸರ ಈ ಮಾತುಗಳಿಗೆ ದೃಷ್ಟಾಂತ ಕಥೆಯೋ ಎನ್ನುವಂತಿರುವ 'ಅಂಗುಲೀಮಾಲ'ನ ಪರಿವರ್ತನೆಯನ್ನು ಕುರಿತ ಇಂಗ್ಲಿಷ್ ಲೇಖನವೊಂದು[1] ನನ್ನ ಕಣ್ಣಿಗೆ ಬಿತ್ತು. ಪಾಪಪುಣ್ಯಗಳ ಬಗೆಗೆ ಒಂದು ರೀತಿಯ ಜಿಜ್ಞಾಸೆ ಬುದ್ಧಿಯ ಮಟ್ಟದಲ್ಲಿ, ಒಂದು ರೀತಿಯ ಮಂಥನ ಹೃದಯದಲ್ಲಿ ನಡೆಯು ತ್ತಿದ್ದ ಸಮಯ ಅದು. "ಅಂಗುಲೀಮಾಲನ ಕಥೆಯನ್ನು ನಾಟಕರೂಪದಲ್ಲಿ ಬರೆದರೆ ಸೊಗಸಾಗಿರುತ್ತದೆ" ಎಂದು ಸೂಚಿಸಿದವರು ನನ್ನ ವಿದ್ಯಾರ್ಥಿ ಗೆಳೆಯ ಚಿ|| ಅ. ರಾ. ಮಿತ್ರ. ಆ ಸೂಚನೆಯನ್ನು ಗ್ರಹಿಸಿದ ಮನಸ್ಸು ಗೆಳೆಯರ ಒಲವಿನ ಹಂದರದ ಮೇಲೆ ಹಬ್ಬಿಸಿದ ಲತಾಕುಂಜ ಈ ಕೃತಿ. ಇದರ ಶ್ರೇಯಸ್ಸೆಲ್ಲ ಅವರ ಒಲುಮೆಗೆ ಮುಡಿಪು.

ಬುದ್ಧನ ಕರುಣೆ ಅಂಗುಲೀಮಾಲನ ಮೇಲೆ ಕಡಲುವರಿಯಿತು. ಇದನ್ನು ಯಾವ ರೀತಿಯಿಂದಲೂ ನಿರೀಕ್ಷಿಸದೆಯೇ ಇದ್ದ ಆತ ತತ್ತರಿಸಿದ. ಚೇತರಿಸಿಕೊಂಡು ಎದ್ದುನಿಲ್ಲುವ ವೇಳೆಗೆ ಅವನ ಕಾಲಡಿಯ ಭೂಮಿ ಬದಲಾಗಿತ್ತು. ಬುದ್ಧಹಸ್ತಾವ

---

[1] *The Buddha and the Robber*—by Marie B. Byles. The Vedanta and the West. July-August, 1955.

ಲಂಬಿಯಾಗಿ ಅವನು ಪುಣ್ಯಪಥದಲ್ಲಿ ಯಾತ್ರಿಕನಾಗಿದ್ದ. ಇಂಥ ಪರಿವರ್ತನೆ ಸಾಧ್ಯ. ಭಗವದ್ಗೀತೆಯ ಮಾತುಗಳು, ಪರಮಹಂಸರ ಅಮೃತವಾಣಿ ಇವೆಲ್ಲಾ ಇದಕ್ಕೆ ಪೋಷಣೆಯನ್ನು ನೀಡುತ್ತವೆ. ಅವತಾರಪುರುಷರ ಒಂದು ಮಾತು, ಒಂದು ಸ್ಪರ್ಶ, ಒಂದು ನೋಟ, ಇವು ವ್ಯಕ್ತಿಯ ಸುಪ್ತ ಚೇತನದ ತಲಾತಲದಲ್ಲಿರುವ ಘೋರಕರ್ಮಗಳ ಸಂಸ್ಕಾರ ಸಮಸ್ತವನ್ನೂ ಸಂಪೂರ್ಣವಾಗಿ ದಹಿಸಿ ದಿವ್ಯಜ್ಞಾನ ವನ್ನು ದಾನಮಾಡಬಲ್ಲುವು, ಅವನಿಗೆ ನೂತನ ಜನ್ಮವನ್ನು ನೀಡಬಲ್ಲುವು, ಅಥವಾ ಜನ್ಮವನ್ನೇ ಇಲ್ಲಗೈಯಬಲ್ಲುವು. ಅಂತಹ ಕೃಪೆಗೆ ಪಾತ್ರನಾಗುವ ವ್ಯಕ್ತಿ ಪುಣ್ಯವಂತ.

ಅಂಗುಲೀಮಾಲನ ಅವಸಾನ, ಮೂಲದಿಂದ ನಾನು ಮಾಡಿಕೊಂಡಿರುವ ಪ್ರಮುಖ ಪರಿವರ್ತನೆ. ಈ ಬದಲಾವಣೆ ಕೃತಿಯ ಸೊಬಗನ್ನು ಹೆಚ್ಚಿಸಿದೆ ಎಂದವ ರುಂಟು, ಕಲಾಪರಿಪೂರ್ಣತೆಗೆ ಭಂಗ ತಂದಿದೆ ಎಂದವರುಂಟು. ಮತ್ತೆ ಮತ್ತೆ ಈ ರೀತಿಯ ಅಂತ್ಯವನ್ನು ಕುರಿತು ಚಿಂತನ ಮಂಥನಗಳನ್ನು ನಡೆಸಿ ಅದು ಮೊದಲು ನನ್ನ ಮನದಲ್ಲಿ ಮೂಡಿದಂತೆಯೇ ಉಳಿಸಿದ್ದೇನೆ. ಈ ನನ್ನ ವಾದವೆಲ್ಲವನ್ನೂ ಒಂದು ವಾಕ್ಯದಲ್ಲಿ ಅಡಕಮಾಡಬಹುದಾದರೆ ಅದು ಹೀಗಿರುತ್ತದೆ: ಸಾವು, ಬದುಕಿನ ಅಂತವೂ ಅಲ್ಲ, ಆದರಿಂದ ಈ ಕೃತಿ ದುರಂತವೂ ಅಲ್ಲ.

ಸುಮಾರು ಒಂದು ತಿಂಗಳಿಗೂ ಹೆಚ್ಚುಕಾಲ ವ್ಯಾಪಿಸಿದ ಕೃತಿರಚನೆಯ ರಸ ಮುಹೂರ್ತಗಳಲ್ಲಿ ಒಂದು ಅಪೂರ್ವವಾದ ಆನಂದವನ್ನು ನನ್ನ ಚೇತನ ಅನುಭವಿಸಿದೆ. ಸಹೃದಯರೂ ವಿಮರ್ಶಕರೂ ವ್ಯಕ್ತಪಡಿಸುವ ಒಳ್ಳೆಯ ಮಾತುಗಳಿಂದ ಒದಗ ಬಹುದಾದ ಸಂತೋಷಕ್ಕಿಂತ ಅನಂತಪಾಲು ಹಿರಿಯದು ಅದು. ಕವಿಗೆ ಮೂಲ ರಸಾನುಭವವನ್ನು ಮತ್ತೆ ದೊರಕಿಸಿಕೊಡುವ ಮಾಧ್ಯಮ ಅವನ ಕೃತಿ. ಹಾಗಾ ದಾಗಲೇ ಅದರ ಸಾರ್ಥಕತೆ. ಸಹೃದಯರಿಗೂ ಈ ಕೃತಿ ಅಂತಹ ರಸಮಾಧ್ಯಮ ವಾಗಲಿ ಎಂಬುದು ನನ್ನ ಬಯಕೆ. ಅದರ ಪೂರೈಕೆ ಭಗವದಿಚ್ಛೆ.

ನಾಡಿನ ಶ್ರೇಷ್ಠಕವಿ ಪೂಜ್ಯ ಪು. ತಿ. ನರಸಿಂಹಾಚಾರ್ಯರು ನನ್ನ ಮೇಲೆ ತಮಗಿರುವ ಅವ್ಯಾಜವಾದ ಪ್ರೇಮದಿಂದ ಈ ಕೃತಿಯನ್ನು ಓದಿ ಅನೇಕ ಸಲಹೆಗಳನ್ನು ನೀಡಿದುದೂ ಅಲ್ಲದೆ, ಅಮೂಲ್ಯವಾದ ಮುನ್ನುಡಿಯನ್ನು ಬರೆದುಕೊಟ್ಟು ನನ್ನನ್ನು ಹರಸಿದ್ದಾರೆ; ಕೃತಿಯನ್ನು ಶ್ರೀಮಂತವನ್ನಾಗಿ ಮಾಡಿದ್ದಾರೆ. ಅವರ ಮಧುರವಾದ ಸ್ನೇಹ ಔದಾರ್ಯಗಳನ್ನು ಸ್ಮರಿಸಹೊರಟರೆ ನುಡಿಗಳು ತಮ್ಮ ಬಡತನವನ್ನು ನೆನೆದು

ನಾಚಿ ನಿಲ್ಲುತ್ತವೆ. ಅದರಿಂದ ಮೌನವೇ ಕೃತಜ್ಞತೆಯನ್ನು ಸಲ್ಲಿಸುವ ಕಾರ್ಯವನ್ನು ಸಮರ್ಪಕವಾಗಿ ನೆರವೇರಿಸಲಿ.

ನನ್ನ ವಿದ್ಯಾಗುರುಗಳೂ ವಾತ್ಸಲ್ಯಮೂರ್ತಿಯೂ ಆಗಿರುವ ಪೂಜ್ಯ ಶ್ರೀ ತ. ಸು. ಶಾಮರಾಯರು ತಮ್ಮ ಮಾಲೆಯಲ್ಲಿ ಈ ಕೃತಿಯನ್ನು ಪ್ರಕಟಿಸುತ್ತಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು.

ನಾನು ಓದಿದ ಇಂಗ್ಲಿಷ್ ಲೇಖನದಿಂದ ಕೆಲವು ಮಾತುಗಳನ್ನೂ ಸಂಭಾಷಣೆಗಳನ್ನೂ ಈ ನಾಟಕದಲ್ಲಿ ಉಪಯೋಗಿಸಿಕೊಂಡಿದ್ದೇನೆ. ಅದಕ್ಕಾಗಿ ಲೇಖಕರನ್ನು ವಂದಿಸುತ್ತೇನೆ.

ಪ್ರಸಿದ್ಧ ಕವಿಗಳೂ, ಆಪ್ತಮಿತ್ರರೂ ಆದ ಶ್ರೀ ಜಿ. ಎಸ್. ಶಿವರುದ್ರಪ್ಪನವರೂ ಅಕ್ಕರೆಯ ಸೋದರಿಯರು ಶಾಂತಿ ಮತ್ತು ಇಂದಿರೆಯರೂ ನಿರಂತರವಾಗಿ ನೀಡಿರುವ ಪರೋಕ್ಷ ಅಪರೋಕ್ಷ ಸ್ಫೂರ್ತಿ ನೆರವುಗಳ ಮಧುರ ಸ್ಮರಣೆ ನನಗೆ ಯಾವಾಗಲೂ ಸಂತೋಷವನ್ನು ನೀಡುತ್ತದೆ.

ಈ ನಾಟಕವನ್ನೋದಿ ಅದಕ್ಕೆ ಸೂಕ್ತವಾದ ಚಿತ್ರವನ್ನು ಪ್ರೀತಿಯಿಂದ ಬರೆದುಕೊಟ್ಟ ನನ್ನ ಪ್ರಿಯಮಿತ್ರ ಶ್ರೀ ಪ್ರಭುಪ್ರಸಾದರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಬೆಂಗಳೂರು ಎ. ಐ. ಆರ್. ಕೇಂದ್ರದವರು ಬುದ್ಧದೇವನ ಎರಡೂವರೆ ಸಹಸ್ರ ವರ್ಷಗಳ ಜಯಂತಿಯ ಆಚರಣೆಯ ಸಂದರ್ಭದಲ್ಲಿ ಈ ನಾಟಕವನ್ನು ಪ್ರಸಾರ ಮಾಡಿದ್ದಾರೆ; ಅವರಿಗೂ ಇದನ್ನು ಮೊದಲು ಅಚ್ಚು ಮಾಡಿದ ಪ್ರಬುದ್ಧ ಕರ್ಣಾಟಕದ ಸಂಪಾದಕರುಗಳಿಗೂ ನನ್ನ ವಂದನೆಗಳು.

ಚಿ. ಅ. ರಾ. ಮಿತ್ರ ಅವರು ಇದನ್ನು ಅಚ್ಚಿಗೆ ಸಿದ್ಧಪಡಿಸಿಕೊಟ್ಟಿದ್ದಾರೆ. ಅವರ ಒಲುಮೆಯ ನೆರವಿಗಾಗಿ ನಾನು ಋಣಿ.

ಇದನ್ನು ಅಂದವಾಗಿ ಮುದ್ರಿಸಿರುವ ವೆಸ್ಲಿ ಮುದ್ರಣಾಲಯದವರಿಗೆ ವಂದನೆಗಳು.

ಮೈಸೂರು
ವೈಶಾಖ ಶುಕ್ಲ ಪೂರ್ಣಿಮಾ
೨೪-೫-೫೬

**ಪ್ರಭುಶಂಕರ**

# ಮುನ್ನುಡಿ

ನನ್ನ ಮೊದಲೆರಡು ಮಾತುಗಳು ಈ ನಾಟಕದ ಪ್ರಾರಂಭದಲ್ಲಿರಬೇಕೆಂದು ಅಪೇಕ್ಷಿಸಿ ಶ್ರೀ ಪ್ರಭುಶಂಕರರು ತಮ್ಮ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ನಮ್ಮ ಪರಸ್ಪರ ಸೌಹಾರ್ದವನ್ನು ಪ್ರಕಟಿಸುವುದಕ್ಕೆ ನನಗೆ ಬಹು ಸಂತೋಷ. ಭಾವುಕರೂ, ಶಾಸ್ತ್ರ ಪಕ್ಷಪಾತಿಗಳೂ, ವಿನಯಶೀಲರೂ, ಆಗಿರುವ ನನ್ನೀ ಮಿತ್ರರಿಗೆ ಕಾವ್ಯಶಾಸ್ತ್ರ ಜಿಜ್ಞಾಸೆಯಲ್ಲಿರುವಷ್ಟು ಅಭಿರುಚಿ ತಮ್ಮ ಕಾವ್ಯದ ಪ್ರಶಂಸೆಯಲ್ಲೂ ಇಲ್ಲ. ಏರಿಕೆಯಲ್ಲಿರುವ ಚೈತನ್ಯದ ಲಕ್ಷಣವಿದು. ಹಾಗೂ ಕಾವ್ಯದಲ್ಲಿ ಕಳೆಯಿದ್ದರೆ ಅದು ಸ್ವಯಂಪ್ರಕಾಶಕವಾದುದರಿಂದ ಕಣ್ಣುಳ್ಳವರಿಗೆ ಅದನ್ನು ಬೆರಳಿಟ್ಟು ತೋರುವ ಅವಶ್ಯಕವಿಲ್ಲವೆಂಬ ಮರ್ಮವನ್ನು ಶ್ರೀ ಪ್ರಭುಶಂಕರರು ಬಲ್ಲರು. ತಮ್ಮ ಕೃತಿಯಲ್ಲಿ ಅವರಿಗೆ ವಿಶ್ವಾಸವುಂಟು; ಈ ನಾಟಕವನ್ನು ಸುಶಿಕ್ಷಿತರಾದ ತಮ್ಮ ಗೆಳೆಯರ ವಿಮರ್ಶೆಯ ಒರೆಗಲ್ಲಿನ ಮೇಲೆ ತೀಡಿ ಬಣ್ಣ ನೋಡಿದ್ದಾರೆ. ಆದುದರಿಂದ ನನ್ನ ಕೆಲಸ ಈಗ ಹಗುರ: ನಾನೂ ಅವರೂ ಕಲೆತಾಗ ಆಡುವ ಕೆಲವು ಮಾತುಗಳನ್ನು ಬರಹಕ್ಕೆ ಇಳಿಸುವುದು.

ಕಾವ್ಯ ಎಂಬ ಮಾತನ್ನು ಉಚ್ಚರಿಸಿದ ಕ್ಷಣವೇ ಮತ್ತೆರಡು ಮಾತುಗಳು ಮೂಡುತ್ತವೆ; ಪ್ರತಿಭೆ ಮತ್ತು ಧ್ವನಿ. ಕವಿಯ ಪರವಾಗಿ ಪ್ರತಿಭೆ, ಸಹೃದಯನ ಪರವಾಗಿ ಧ್ವನಿ; ಇಲ್ಲಿ 'ಪ್ರತಿಭೆ'ಯಂತೆ ಆಗಮನ, ಅಲ್ಲಿ 'ಧ್ವನಿ'ಯಂತೆ ನಿರ್ಗಮನ. ನಡುವೆ ಮಹತ್ತರವಾದ ಕಾವ್ಯಕೋಲಾಹಲ. ಅವರವರ ಅಭಿರುಚಿಗೂ ಸಂಸ್ಕಾರಕ್ಕೂ ತಕ್ಕಂತೆ, 'ಪ್ರತಿಭೆ'ಯಲ್ಲಿ ಮೂಡಿದಂತೆ ತೋರದೆ 'ಧ್ವನಿ'ಯಲ್ಲಿ ಪರಿಣಾಮವನ್ನು ಕಾಣದೆ, ಬರಿಯ ಕಾವ್ಯಕಾಯವನ್ನು ಮಾತ್ರ ಪ್ರದರ್ಶಿಸುವಂತಿರುವ ಕೃತಿಗಳೂ ಹೇರಳವಾಗಿ ಕಂಡುಬರುತ್ತವೆ. ಇವುಗಳಿಂದ ಉಪಯೋಗವಿಲ್ಲದಿಲ್ಲ. ಇವುಗಳಿಂದ ಒಂದು ಸಾಹಿತ್ಯಕ್ಕೆ ಮೈದುಂಬು ಬರುತ್ತದೆ. ಪ್ರತಿಭೆಯಿಂದ ಪ್ರಾಪ್ತವಾದ ಕಾವ್ಯ-ವ್ಯಾಪಾರದ ಉಳಿವಿಗೆ ಇವು ಮುಖ್ಯವಾಗಿ ಬೇಕು. ಇವುಗಳನ್ನು ಅಭ್ಯಸಿಸದೆ ಪ್ರತಿಭಾಮೂಲ ಧ್ವನ್ಯಂತ ಕಾವ್ಯಗಳನ್ನು ಗುರುತಿಸುವುದೂ ಕಷ್ಟವಾಗುತ್ತದೆ. ಕುಮಾರವ್ಯಾಸನ ಅಕ್ಕಪಕ್ಕದಲ್ಲಿ ಅವನ ಕಾವ್ಯೋತ್ಕರ್ಷವನ್ನು ತೋರುವುದಕ್ಕೋ ಎಂಬಂತಿರುವ ಎಷ್ಟೊಂದು ಕೃತಿಗಳು! ಅಲ್ಲದೆ ಅವ್ಯಾಹತವಾಗಿ ಕಾವ್ಯಕರ್ಮ ನಡೆಯದಿದ್ದರೆ ಪ್ರತಿಭಾಶಾಲಿಯಾದ ಕವಿ ಮತ್ತು ಆತನ ಕಾವ್ಯದಿಂದ ಹಾಯ್ದಟ್ಟನ್ನು

ಪಡೆಯಬಲ್ಲ ಸಹೃದಯವೃಂದ, ಇಬ್ಬರೂ ಮೃಗ್ಯರಾಗುತ್ತಾರೆ. ಮತ್ತು ಇಂಥ ಕಾವ್ಯ ಕರ್ಮಗಳು ಕಾವ್ಯಪರಿಕರ್ಮಕೌಶಲವನ್ನೂ, ಪದ್ಧತಿಯನ್ನೂ ಮಾಸದಂತೆ ಒಳ್ಳೆಯ ಹೊಳಪಿನಲ್ಲಿಟ್ಟಿರುತ್ತವೆ. ಕತ್ತಿಯನ್ನು ಝಳಪಿಸುವವರೆಲ್ಲಾ ಶೂರರಾಗಬೇಕಾಗಿಲ್ಲ; ಕತ್ತಿಯೂ ಚರಮಾಯುಧವಲ್ಲ. ಶಸ್ತ್ರಾಗಾರವೂ, ಸೈನ್ಯವೂ ವೀರಪ್ರವೃತ್ತಿಯನ್ನು ಜೀವಂತವಾಗಿ ಕಾಪಾಡಿಕೊಂಡು ಬರುವುದಕ್ಕೆ ಏರ್ಪಡಿಸಿರುವ ಉಪಾಯಗಳು. ಇವು ಶೂರನುದಯವನ್ನು ಹಾರೈಸುತ್ತವೆ; ಅಂಥವನುದಿಸಿದಾಗ, ಅನುಸರಿಸಿಯೋ ಎದುರಿಸಿಯೋ, ಅವನನ್ನು ಗುರುತಿಸಿ ಅವನ ಉತ್ಕರ್ಷಕ್ಕೂ ಉಪಯೋಗಕ್ಕೂ ಒದಗಿ ಬರುತ್ತವೆ. ಆತ ಆ ಕಾಲದ ಪರಿಸ್ಥಿತಿಗೂ, ತನ್ನ ಶಕ್ತಿ ಸಂಸ್ಕಾರಗಳಿಗೂ ತಕ್ಕಂತೆ ಇವು ಗಳನ್ನು ಬಳಸಿಕೊಳ್ಳಬಹುದು. ಇಲ್ಲ ತನ್ನ ಪ್ರಜ್ಞಾಬಲದಿಂದ ಇವುಗಳನ್ನು ತಿರಸ್ಕರಿಸಿ ಆ ತಿರಸ್ಕರಣದಿಂದಲೇ ಪ್ರತಿಭಾ ಪ್ರಚೋದನೆಯನ್ನು ಪಡೆದು ಹೊಸ ಶಸ್ತ್ರಗಳನ್ನೂ ಕವಾಯತ್ತುಗಳನ್ನೂ ವ್ಯೂಹರಚನೆಗಳನ್ನೂ ನಿರ್ಮಿಸಿ ಬಳಕೆಗೆ ತರಬಹುದು. ಈ ನವ್ಯ ಮಾರ್ಗದ ಉಳಿವೂ ಇಂಥ ಮಧ್ಯವರ್ಗಕ್ಕೇ ಸೇರಿದುದು. ಆದುದರಿಂದ ಒಂದು ಸಾಹಿತ್ಯದಲ್ಲಿ ನಡೆಯುವ ಸಾಹಿತ್ಯಕರ್ಮದಿಂದ ಎಲ್ಲರಿಗೂ, ಮುಖ್ಯವಾಗಿ ಪ್ರತಿಭಾ ಸಂಪನ್ನನಿಗೆ, ಉಪಯೋಗವುಂಟು, ಪ್ರಚೋದನೆಯುಂಟು. ಆದುದರಿಂದ ಕಾವ್ಯ-ಪ್ರವೃತ್ತಿಯುಳ್ಳ ಯಾವನೂ ತನ್ನ ಕೃತಿರಚನೆಯಿಂದ ಆ ವೃತ್ತಿಗೆ ಪೋಷಣೆಯನ್ನು ಕೊಡುವುದು ಒಂದು ಗಣ್ಯ ಕರ್ಮವೇ ಸರಿ.

ಅಲ್ಲದೆ ಒಂದು ಕೃತಿಯ ಕಾವ್ಯಗುಣವನ್ನು ನಿಷ್ಕೃಷ್ಟವಾಗಿ ಅಳೆದು ವಿಂಗಡಿಸಿ ಸ್ಥಾನಮಾನಗಳನ್ನು ಸ್ಪಷ್ಟಗೊಳಿಸುವ ಚೀಟಿಯಿಂದ ಅದನ್ನು ಅಲಂಕರಿಸುವುದೂ, ಸಮಕಾಲೀನ ಕೃತಿಗಳ ವಿಷಯದಲ್ಲಿ ಕಷ್ಟ. ಕವಿಯ ಪ್ರತಿಭೆ ಕವಿಗೆ ವಿಶಿಷ್ಟ; ಸಹೃದಯನ ಧ್ವನ್ಯನುಭವ ಸಹೃದಯನಿಗೆ ವಿಶಿಷ್ಟ. ಹೀಗೆ ವಿಶಿಷ್ಟನಿಂದ ವಿಶಿಷ್ಟನಿಗೆ ಪ್ರವಹಿಸುವ ಕಾವ್ಯರಸದ ಪ್ರವಹಣವಾದ ಶಬ್ದಾರ್ಥಪಾತ್ರವೂ ಅನಿರ್ದಿಷ್ಟ ರೂಪ ರೇಖೆಗಳುಳ್ಳದ್ದು. ಸಾಮಾನ್ಯವೆಂದು ಪರಿಭಾವಿಸಬಹುದಾದ ಕರಿಮುಗಿಲಿನ ಬಣ್ಣವನ್ನು ಕಂಡು ಮರುಳಾಗಿ ನಮ್ಮಾಳ್ವಾರ್ ಅವರು ಆರು ತಿಂಗಳ ಕಾಲ ತುರೀಯಾವಸ್ಥೆಯಲ್ಲಿ ನಿಂತರಂತೆ. ಹಾಗೆಯೇ ಬುದ್ಧನನ್ನು ತಿರಸ್ಕರಿಸಿದ ದೇವದತ್ತನಂತೆ ಸತ್ಕಾವ್ಯದಿಂದಲೂ ಧ್ವನಿಯ ರೋಮಾಂಚವನ್ನು ಪಡೆಯಲಾರದ ವಿಮರ್ಶಕವರ್ಗವುಂಟು. ಮತ್ತು ಒಂದು ಕೃತಿಯು ಆ ಕಾಲದ ಪ್ರಭಾವಶಾಲಿಗಳಾದ ವಿಮರ್ಶಕರ ಕಾವ್ಯಶಾಸ್ತ್ರ ಸಿದ್ಧಾಂತಗಳಿಗೆ ಅಳವಡುವಂತಿದೆಯೋ ಇಲ್ಲವೇ ಎಂಬುದರ ಮೇಲೂ ಅದರ

ಬೆಲೆಯು ಏರುವೆ ಅಥವಾ ಇಳಿತ ಅವಲಂಬಿಸಿದೆ. 'ಕಲೆ ಜನಜೀವನದ ಪ್ರತಿಬಿಂಬ' ವೆಂಬ ಮತನಿಷ್ಠರಿಗೆ ಆ ಮತವನ್ನು ಅಷ್ಟಾಗಿ ಒಲ್ಲದ ಕವಿಯ ಕೃತಿ ರಂಜಿಸದು. ಆ ರೀತಿಯಲ್ಲೇ, "ಕಲೆಯ ಚರಮಫಲ ಚೈತನ್ಯೋತ್ಕರ್ಷವನ್ನು ಪಡೆಯುವುದು" ಎಂಬ ಮತಕ್ಕೆ ಸಂದಿರುವ ಕವಿಯ ಕಾವ್ಯ ಭವನಿಮಗ್ನತೆಯನ್ನೇ ಬಯಸುವ, ಅದರಲ್ಲೇ ರಮಿಸುವ ಜನವರ್ಗಕ್ಕೆ ರುಚಿಸದು. ಕೆಲವರಿಗೆ ಆವೇಗಗಳ ಸಂಕ್ರಮಣ ದಲ್ಲಿ ಅಭಿರುಚಿ ; ಮತ್ತೆ ಕೆಲವರಿಗೆ ಅವುಗಳ 'ರಸ'ಪರಿಣಮನದಲ್ಲಿ. ಆದುದರಿಂದ ಕಾವ್ಯದ ವಿಷಯದಲ್ಲಿ ಯಾವ ಮತದೊಡನೆಯೂ ಅವಿಚಾಲ್ಯ ಸಂಬಂಧವನ್ನಿಟ್ಟು ಕೊಳ್ಳದಿರುವ ಸಹೃದಯರಿಂದ ಕವಿಗಣಕ್ಕೆ ಬಹು ಉಪಕಾರವಾಗುತ್ತದೆ ಎನ್ನಬಹುದು. ಇಂಥವರಿಂದಲೇ ಹಳೆಯವಲ್ಲಿ ಒಳ್ಳೆಯವಕ್ಕೆ ಉಳಿವು ; ನವ್ಯಕಾವ್ಯಕ್ಕೂ ಅವಕಾಶ.

ಮೇಲೆ ಕಂಡಂತೆ ಕವಿಯ ಕಾವ್ಯದ ಬೆಲೆ ತಾನು ಪ್ರತಿಭಾಶಾಲಿ ಎಂಬ ಆತ್ಮ ಪ್ರತ್ಯಯದ ಮೇಲೆ ಅಷ್ಟಾಗಿ ಅವಲಂಬಿಸದೆ ರಸಿಕರನ್ನು ಅವಲಂಬಿಸಿರುವುದರಿಂದ ತನ್ನ ಕಲೆಯಲ್ಲಿ ಏರುವೆಯನ್ನು ಬಯಸುವ ಕವಿ ತನ್ನ ಸಾಮರ್ಥ್ಯದಲ್ಲೂ ಪ್ರತಿಭಾ ಸಂಪನ್ನತೆಯಲ್ಲೂ ಸಂದೇಹಗ್ರಸ್ತನಾಗುವುದೂ, ಮತ್ತು ತನ್ನ ಕೃತಿಯಿಂದ ಸಂತುಷ್ಟ ರಾಗದ ರಸಿಕವೃಂದವನ್ನು ಅನಭಿಜ್ಞರೆಂದು ತಿರಸ್ಕರಿಸದಿರುವುದೂ ಶ್ರೇಯಸ್ಕರ. ತನಗೆ ತನ್ನ 'ಒಳಮುದ್ದು' ಕವಿಗೆ ಸತ್ಯವಾಗಿರಬಹುದು. ಅದು ತನ್ನ ಕಾವ್ಯಮುಖೇನ, ಎಂದರೆ, ತನಗೇ ವಿಶಿಷ್ಟವಲ್ಲದೆ ಸಾಮಾಜಿಕವಾದ ಶಬ್ದಾರ್ಥಗಳ ಮೂಲಕ 'ಹೊರ ಮುದ್ದು' ಆಗಬೇಕಾಗಿರುವುದನ್ನು ಆತ ಮರೆಯುವಂತಿಲ್ಲ. ಕವಿಯಾಗಲಿ ಕಲೆಗಾರ ರಾಗಲಿ ಅವರಿಗಿರುವ ಸಮಸ್ಯೆಯೆಲ್ಲಾ ತಮ್ಮೊಳಮುದ್ದನ್ನು ಹೊರಮುದ್ದಾಗಿಸುವು ದೆಂತು ಎಂಬುದೇ. ಏಕೆಂದರೆ 'ಒಳಮುದ್ದು' ಸೃಷ್ಟವಾದುದಲ್ಲ, ದತ್ತವಾದುದು. ತಾನು ಬೇಕೆಂದಾಗ ಅದು ಲಭಿಸದು. ಅದರ ಪ್ರಾದುರ್ಭಾವ ಆಕಸ್ಮಿಕ, ಅನಿಯತ; ಅದನ್ನು ದೈವಾಯತ್ತವೆಂದರೂ ತಪ್ಪಲ್ಲ. ಇದರ ಬಹಿಷ್ಕರಣಕ್ಕೆ ಒದಗಿಬರುವ ಚಿಚ್ಛಕ್ತಿ ಪ್ರತಿಭೆ. ಪ್ರತಿಭೆಯ ಲಕ್ಷಣವನ್ನು ಒಂದು ಮಾತಿನಲ್ಲಿ ಉಲ್ಲೇಖಿಸುವುದು ಕಷ್ಟ. ನವನವೋನ್ಮೇಷಶಾಲಿನಿಯಾದ ಪ್ರಜ್ಞೆ ಎಂಬುದು ಅದರ ಅತ್ಯಂತ ಸಮೀಚೀನ ವಾದ ವರ್ಣನೆ ಎನ್ನಬಹುದು. ಹಾಗಾದರೆ 'ಪ್ರಜ್ಞೆ' ಎಂದರೇನು? ಅರಿವಿನ ಸಂವೇದನಾರೂಪವನ್ನು 'ಪ್ರಜ್ಞೆ' ಎನ್ನಬಹುದಲ್ಲವೆ? ಸಂವೇದನೆಯಿಲ್ಲದೆ ಯಾವುದರ ನಿಜವಾದ ಅರಿವೂ ನಮಗಾಗದು. ಮಗು ಅಳುತ್ತಿದ್ದರೆ ಮಲತಾಯಿಗೆ ಅದರ ಅಸುಖದ ಅರಿವು ಮಾತ್ರ ಆಗುತ್ತದೆ, ತಾಯಿಗೋ ಆ ಅಸುಖದ 'ಪ್ರಜ್ಞೆ' ಮೂಡು

ತ್ತದೆ. ಜಗತ್ತು ದುಃಖ ಭೂಯಿಷ್ಠವಾದುದು ಎಂಬುದು ಯಾರಿಗೆ ಗೊತ್ತಿಲ್ಲ? ಆದರೆ ಅದರ 'ಪ್ರಜ್ಞೆ' ನಮಗಿಲ್ಲ. ಆ 'ಪ್ರಜ್ಞೆ'ಯನ್ನು ಪಡೆದುದರಿಂದ ಬುದ್ಧ ಕಾಡಿಗೋಡಿ ಪ್ರಬುದ್ಧನಾದ. ಸುಸಂಸ್ಕೃತವಾದ ಚೈತನ್ಯ ಮಾತ್ರ ತನ್ನ ಅತ್ಯುನ್ನತ ಸ್ಥಿತಿಯಲ್ಲಿ 'ಪ್ರಜ್ಞೆ'ಯನ್ನು ಪಡೆಯಬಲ್ಲದು. ಪರರ ಆಡಳಿತದಲ್ಲಿರುವುದು ನಮಗೆ ಹೀನಾಯವೆಂಬ ಜ್ಞಾನದ 'ಪ್ರಜ್ಞಾ' ರೂಪಕ್ಕೆ ನಿಸ್ಸಂಗನೂ ಯತ್ನಶೀಲನೂ ಸಾಧುವೂ ಆದ ಮಹಾತ್ಮ ಗಾಂಧಿ ಒಳ್ಳೆಯ ಆಕರವಾದುದರಿಂದ ಅವನ ಮಾತು ಗಳಲ್ಲೂ ನಡತೆಯಲ್ಲೂ ಈ 'ಪ್ರಜ್ಞೆ' ಪ್ರವಹಿಸಿ ಎಲ್ಲರನ್ನೂ ಚೇತನಗೊಳಿಸಿತು, ಎಲ್ಲರ ಆತ್ಮೋತ್ಕರ್ಷಕ್ಕೂ ಕಾರಣವಾಯಿತು. ಕವಿಯ ಕಾವ್ಯದಲ್ಲಿ 'ಪ್ರಜ್ಞೆ' ಹರಿದಾಗ ಮಾತ್ರ ಅದು ಸಕಲ ಭೋಗ್ಯವಾಗುತ್ತದೆ. 'ಒಳಮುದ್ದು' 'ಹೊರಮುದ್ದಾ'ಗಿ, ಜಗ ತ್ತನ್ನು ಬೆಳಗುವುದು ಇಂಥ ಕಾವ್ಯದ ಮೂಲಕ. ಸಂಗೀತ ಕಲೆಗಳಲ್ಲಿ ಗಣ್ಯತಮವೆನಿಸಿ ಕೊಂಡಿರುವುದು ಏತರಿಂದ ಎಂದರೆ, ಅದು ಪ್ರಜ್ಞಾಪ್ರವಹಣಕ್ಕೆ ಅತ್ಯುತ್ಕೃಷ್ಟವಾದ ಮಾಧ್ಯಮವಾಗಿರುವುದರಿಂದ. ಪ್ರಜ್ಞಾವಂತನ ಕಲೆಯಿಂದಾಗಲಿ, ಕಾವ್ಯದಿಂದಾ ಗಲಿ ಸಂವೇದನೆಯನ್ನು ಪಡೆವ ಸಹೃದಯನೂ ತನ್ಮೂಲಕ ಆತ್ಮೋತ್ಕರ್ಷವನ್ನು ಪಡೆಯುವುದರಿಂದ ಕಲೆಗೂ ಕಾವ್ಯಕ್ಕೂ ಕವಿಗೂ ಆತನಿಂದ ಪುರಸ್ಕಾರ ಲಭಿಸುತ್ತಿದೆ.

ಈ ಸಂದರ್ಭದಲ್ಲಿ ಕುಮಾರವ್ಯಾಸನ ಈ ಮಾತು ಜ್ಞಾಪಕಕ್ಕೆ ಬರುತ್ತದೆ. "ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ"—ವೀರನಾರಾಯಣನ ಸ್ಥಾನ ದಲ್ಲಿ ಅವತರಣೋನ್ಮುಖವಾದ ಸಂವೇದನಾ ರೂಪದಲ್ಲಿರುವ ವಿಶ್ವದ ಸಮಸ್ತ ಜ್ಞಾನ ವನ್ನು ಎಂದರೆ ಪ್ರಜ್ಞೆಯನ್ನು ಇಡೋಣ; ಲಿಪಿಕಾರನ ಸ್ಥಾನದಲ್ಲಿ ಆ ಪ್ರಜ್ಞೆಗೆ ಪಾತ್ರವಾಗಿ ಅದರ ಬಹಿಷ್ಕರಣದಲ್ಲಿ ತೊಡಗಿರುವ ಕವಿಯ ಕಾವ್ಯ ಪ್ರವೃತ್ತಿ ಯನ್ನಿಡೋಣ. ಈಗ ಕುಮಾರವ್ಯಾಸನ ಆಶಯ ಸ್ಪಷ್ಟವಾಗುತ್ತದೆ. ನಾನು ಮಾಡತಕ್ಕ ಕಾರ್ಯವೆಲ್ಲ ದೈವದತ್ತವಾದ ಪ್ರಜ್ಞೆಯ ಪ್ರವಹಣಕ್ಕೆ ನಿಮಿತ್ತವಾಗು ವುದು ಮಾತ್ರ ಎಂಬುದು ಕವಿಯ ಆಶಯ. 'ನಿಮಿತ್ತಮಾತ್ರಂ ಭವ ಸವ್ಯಸಾಚಿನ್' ಎಂಬ ಗೀತಾವಾಕ್ಯದಲ್ಲಿ ಸವ್ಯಸಾಚಿನ್ ಎಂಬ ಸಂಬೋಧನೆ ಬಹು ಸ್ವಾರಸ್ಯವಾಗಿದೆ. ಎಡಗೈಯಲ್ಲೂ ಬಲಗೈಯಲ್ಲೂ ಅದ್ಭುತವಾದ ಕೌಶಲದಿಂದ ಧನುಸ್ಸನ್ನು ಹಿಡಿದು ಬಾಣಗಳನ್ನು ಬಿಡಬಲ್ಲ ಅರ್ಜುನನಂಥ ಬಿಲ್ಗಾರ ಮಾತ್ರ ವಿಲಯದಲ್ಲಿ ತೊಡಗಿರುವ ದೈವಚಿತ್ರಕ್ಕೆ ನಿಮಿತ್ತವಾಗಬಲ್ಲ; ಮಿಕ್ಕವರಿಗೆ ಹೀಗೆ ನಿಮಿತ್ತವಾಗುವ ಗೌರವವಿಲ್ಲ, ಭಾಗ್ಯವಿಲ್ಲ. ಕವಿ ತನ್ನ ಆತ್ಮಸಂಸ್ಕಾರದಿಂದ 'ಪ್ರತಿಭೆ'ಗೆ ಎಂದರೆ, ಉದಯೋನ್ಮುಖ

ಪ್ರಜ್ಞೆಗೆ ಮಿಕ್ಕವರಿಗಿಂತ ಹೆಚ್ಚು ಪಾತ್ರವಾಗುವಂತೆ ಮಾಡಿಕೊಳ್ಳುವುದು ಇದರಲ್ಲಿ ಒಂದು ಅಂಶ. ಮತ್ತೊಂದಂಶ, ಹೀಗೆ ಪ್ರಾಪ್ತವಾದ ಪ್ರತಿಭಾಪುರಸ್ಕೃತ ಪ್ರಜ್ಞೆಯನ್ನು ಎಲ್ಲೂ ಪೋಲಾಗದಂತೆ ಕಾವ್ಯಕಾಯದಲ್ಲಿ ಪ್ರವಹಿಸುವಂತೆ ಮಾಡುವ ಪರಿಕರ್ಮ ಕೌಶಲವನ್ನು ಪಡೆಯುವುದು. ಇವೆರಡು ಅಂಶಗಳೂ ದೈವಾಯತ್ತಗಳಲ್ಲ, ಪುರುಷಾಯತ್ತಗಳು. ಕವಿಯಾಗ ಬಯಸುವವರೆಲ್ಲರೂ ಅಭ್ಯಾಸದಿಂದ ಪಡೆಯಬಲ್ಲಂಥವುಗಳು. ಆತ್ಮಸಂಸ್ಕರಣ ಬಲದಿಂದಲೂ, ಶಬ್ದಾರ್ಥ ಪರಿಜ್ಞಾನ ಪ್ರಯೋಗ ಕೌಶಲದಿಂದಲೂ, ಪ್ರತಿಭೆಯನ್ನೂ ಪುರುಷಾಯತ್ತವೆನಿಸಿದ ರತ್ನಾಕರವರ್ಣಿಯಂಥ ಶಿಖರೋಪಾಂತ್ಯ ಕವಿಗಳು ಕನ್ನಡ ಸಾಹಿತ್ಯದಲ್ಲಿ ಇಲ್ಲದಿಲ್ಲ. ವಿದ್ಯಾಧಿದೇವತೆಯಾದ ಗಣೇಶನಂಥ 'ಲಿಪಿಕಾರ' ದೊರೆಯದಿದ್ದರೆ ವ್ಯಾಸನಂಥವನ ಪ್ರತಿಭೆ ತಾನೆ ಏನು ಮಾಡೀತು? ಮಿಕ್ಕ ಕಲೆಗಳೆಲ್ಲ ಪ್ರತಿಭೆಗೆ ಹೆಚ್ಚು ಪ್ರಾಶಸ್ತ್ಯಕೊಡದೆ 'ಲಿಪಿಕಾರತನ'ಕ್ಕೆ ಕೊಟ್ಟು ಚೆನ್ನಾಗಿ ಬದುಕುತ್ತಿವೆ. ಸಾಹಿತ್ಯ ನಿರ್ಮಿತಿಯಲ್ಲಿ ಮಾತ್ರ ಈಚೀಚೆಗೆ ಇದಕ್ಕೆ ಅಷ್ಟಾಗಿ ಪ್ರಾಶಸ್ತ್ಯ ಪ್ರಾಧಮ್ಯಗಳು ದೊರೆತಿಲ್ಲ. ಸಹೃದಯವೃಂದಕ್ಕೂ ಈ 'ಲಿಪಿಕಾರ'ನ ಮೂಲಕವೇ 'ಕವಿ'ಯ ದರ್ಶನವೆಂಬುದನ್ನು ಕವಿಯು ಮರೆಯಬಾರದು. ತಕ್ಕ 'ಲಿಪಿಕಾರ'ನಾಗುವುದು ಅಷ್ಟು ಸುಲಭವಲ್ಲ. ವಿಪುಲಾನುಭವ, ಅನೇಕ ಶಾಸ್ತ್ರಗಳ ಪರಿಚಯ, ಲೋಕಜ್ಞಾನ—ಏಕೆಂದರೆ ಇವುಗಳಿಂದ ತಾನು ಸಂಪಾದಿಸಿರುವ ಜ್ಞಾನವೇ ತನ್ನ ಕಾವ್ಯದ ಸಂವೇದನಾ ಸಾಮಗ್ರಿ—ಇವುಗಳನ್ನು ಕವಿ ಪಡೆದಿರದೆ ತನಗೆ ಪ್ರಾಪ್ತವಾಗಬಹುದಾದ ಪ್ರತಿಭೆಗೆ ತಕ್ಕ ಆಕರನಾಗಲಾರ. ಜ್ಞಾನ ಸಂವೇದನೆಗೆ ಪರಿಣಮಿಸುವುದು ದೈವಚಿತ್ತಕ್ಕೆ ಸೇರಿದುದು, ಎಂದರೆ ಪ್ರಜ್ಞೆ ತಾನೊಲಿದವನಿಗೆ ದೊರೆಯುತ್ತದೆ. ಅದರ ಅವತರಣ ಪ್ರವೃತ್ತಿ, ಎಂದರೆ, ಪ್ರತಿಭೆ ಯಾವ ಕವಿಯನ್ನಾದರೂ ಕುರಿತು "ಸ ಮೇ ಪ್ರಿಯಃ" ಎನ್ನಬೇಕಾದರೆ "ಅನಹಂವಾದೀ, ಶುಚಿಃ, ದಕ್ಷಃ" ಇತ್ಯಾದಿ ಗುಣಗಳಿಗೆ ಆತನೂ ಪಾತ್ರನಾಗಬೇಕು. ಸತ್ಕಾವ್ಯಗಳ ಅಧ್ಯಯನದಿಂದಲೂ, ತನಗಿಂತಲೂ ಮೇಲಾದುದರ ಸಂತತ ಸಂಸರ್ಗದಿಂದಲೂ ಅನಹಂವಾದಿತ್ವವನ್ನು ಯಾವನಾದರೂ ಸಂಪಾದಿಸಿಕೊಳ್ಳಬಹುದು; ತನ್ನ ಕಾವ್ಯದಲ್ಲಿ ಸೈಜತೆಯಿಂದಿರೋಣದರಿಂದ ಶುಚಿತ್ವವನ್ನೂ, ಔಚಿತ್ಯಾದಿ ಕೌಶಲಗಳಿಂದ ದಕ್ಷತೆಯನ್ನೂ ಆತ ಪಡೆಯಬಹುದು. ಇವೆಲ್ಲಾ ಪುರುಷಾಯತ್ತಗಳು. ಉದಯೋನ್ಮುಖ ಪ್ರಜ್ಞೆ ತನ್ನ ಪ್ರವರ್ತನಕ್ಕಾಗಿ ಏತದ್ಗುಣವಿಶಿಷ್ಟನನ್ನೇ ಆರಿಸಿಕೊಳ್ಳುವ ಸಂಭವ ಹೆಚ್ಚು. ಇಂಥ ಯತ್ನಶೀಲನಿಗೆ ಪ್ರತಿಭೆ ಬಹುಕಾಲ ಸೆಟೆದು ನಿಲ್ಲದು.

ಎಲ್ಲಕ್ಕೂ ಸತ್ಸಂಗ ಬಹು ಮುಖ್ಯ. "ಸತಾಂ ಸಂಗಾದ್ವಿನಾ ಲೋಕೇ ಲಭ್ಯತೇ ನ ಸುಖಂ ನರೈಃ". ಕವಿಗೆ ಸತ್ಸಂಗ ಉತ್ಕೃಷ್ಟ ಕೃತಿಗಳು—ಅವುಗಳ ಸಂತತಾಧ್ಯಯನ, ಪರಾಮರ್ಶೆ, ವಿಮರ್ಶೆ, ಅವುಗಳೊಡನೆ ಸ್ಪರ್ಧೆ.

ಶ್ರೀ ಪ್ರಭುಶಂಕರರಿಗೆ ಉತ್ಕೃಷ್ಟ ಕಾವ್ಯಗಳ ಸತ್ಸಂಗ ಯಥೇಷ್ಟವಿದೆ. ಈ ನಾಟಕವನ್ನು ಓದಿದವರಿಗೆ ಇವರಿಗೆ ಶಬ್ದಗಳ ಮೇಲೂ ಛಂದಸ್ಸಿನ ಮೇಲೂ ಒಳ್ಳೆಯ ಪ್ರಭುತ್ವವಿದೆ ಎಂಬುದು ಅರಿವಾಗದಿರದು. ಇವರಿಗೆ ಶಾಸ್ತ್ರಾಭಿರುಚಿಯುಂಟು. ಈ ನಾಟಕದಲ್ಲಿನ ವಿಷಯ, ಇದರಲ್ಲಿ ಬರುವ ಬುದ್ಧನ ಶಿಷ್ಯರಾಡುವ ಮಾತುಗಳು ಮತ್ತು ಗುರುಸ್ತುತಿ ಇವುಗಳನ್ನು ನೋಡಿದರೆ ಇವರ ಆತ್ಮ ತನ್ನ ಸಂಸ್ಕಾರದಲ್ಲಿ ಎಂಥ ಒಳ್ಳೆಯ ದಾರಿಯನ್ನು ಹಿಡಿದಿದೆ—ಎಂಬುದು ಗೊತ್ತಾಗುತ್ತದೆ. ಬುದ್ಧೋತ್ಸವದ ಈ ಶುಭದಿನಗಳಲ್ಲಿ 'ಬುದ್ಧ ಮತ್ತು ಅಂಗುಲಿಮಾಲ' ಎಂಬ ಎರಡು ವಿರುದ್ಧ ಪ್ರಕೃತಿಗಳ ಸಂಘರ್ಷಣೆಯಿಂದುಂಟಾದ ಮಹತ್ಪ್ರಜ್ಞೆ ಕಾಲಕಾಲಕ್ಕೂ ಪರಿಸ್ಫುಟವಾಗುವ ತನ್ನ ಯತ್ನದಲ್ಲಿ ಶ್ರೀ ಪ್ರಭುಶಂಕರರಂತಹ ಸಂಸ್ಕಾರಸಂಪನ್ನರನ್ನು ಆರಿಸಿಕೊಂಡುದರಲ್ಲಿ ಆಶ್ಚರ್ಯವೇನಿಲ್ಲ. ಆ ಮಹಾಭಾವ ಇವರಲ್ಲಿ ಹೊಕ್ಕು ಹೊರಬರುವಲ್ಲಿ ಪಡೆದ ಆಕಾರದಿಂದ ಈಗಿನ ಇವರ ಮನೋದ್ರವ್ಯದ ವಿಶಿಷ್ಟ ಗುಣಗಳು ಪ್ರಕಾಶಕ್ಕೆ ಬರುತ್ತವೆ. ಈ ದ್ರವ್ಯದ ಯಾವ ಪ್ರಕೃತ್ಯಂಶ ಈ ನಾಟಕದ ಮೊದಲಲ್ಲಿ ಬುದ್ಧನಾಡುವ ವರ್ಣನೆಯ ಮಾತುಗಳನ್ನು ಪ್ರಚೋದಿಸಿತು, ಹಾಗೆಯೇ ಯಾವ ಅಂಶದೊಡನೆ ತಾಗಿ ಅಂಗುಲೀಮಾಲ ತನ್ನ ಅಸ್ತಿತ್ವವನ್ನೇ ಕಳೆದುಕೊಂಡ ಇತ್ಯಾದಿ ಪ್ರಕಾರಗಳು ರಸಿಕರ ವಿಮರ್ಶೆಗೂ ಶಾಸ್ತ್ರಜ್ಞರ ವಿಶ್ಲೇಷಣಕ್ಕೂ ತಕ್ಕವು, ಅವರ ಕೌತುಕವನ್ನು ಕೆರಳಿಸುವಂಥವು. ಯತ್ನಶೀಲರೂ ಸನ್ಮಾರ್ಗಪ್ರಿಯರೂ ಆದ ನನ್ನ ಮಿತ್ರರಿಗೆ ಕಾವ್ಯಪಥದಲ್ಲಿ ಸುಖಪ್ರಯಾಣವನ್ನೂ ಗಮ್ಯಸಿದ್ಧಿಯನ್ನೂ ಹೃತ್ಪೂರ್ವಕವಾಗಿ ಕೋರಿ ಈ ಎರಡು ಮಾತುಗಳನ್ನು ಮುಗಿಸುತ್ತೇನೆ.

ವೈಶಾಖ ಶುಕ್ಲ ಪಂಚಮಿ **ಪು. ತಿ. ನ.**

ಅಪಿ ಚೇತ್ ಸು ದುರಾಚಾರೋ ಭಜತೇ ಮಾಮನನ್ಯಭಾಕ್ |
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ||

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವತ್ ಶಾಂತಿಂ ನಿಗಚ್ಛತಿ |
ಕೌಂತೇಯ ಪ್ರತಿ ಜಾನೀ ಹಿ ನಮೇ ಭಕ್ತಃ ಪ್ರಣಶ್ಯತಿ ||

ಭಗವದ್ಗೀತಾ ೯ : ೩೦, ೩೧.

ಎಂತಹ ದುರಾಚಾರಿಯೇ ಆಗಿರಲಿ ಅನನ್ಯ ಶರಣನಾಗಿ ನನ್ನನ್ನೇ ಭಜಿಸಿದುದಾದರೆ ಅಂತಹವನನ್ನು ಸಾಧುವೆಂದೇ ಬಗೆಯಬೇಕು. ಏಕೆಂದರೆ ಆತ ಋಜುವಾದ ನಿರ್ಣಯವನ್ನೇ ಕೈಗೊಂಡಿದ್ದಾನೆ. ಅಂತಹವನು ಕ್ಷಿಪ್ರವಾಗಿಯೇ ಧರ್ಮಾತ್ಮನಾಗುತ್ತಾನೆ. ಶಾಶ್ವತವಾದ ಶಾಂತಿಯನ್ನು ಪಡೆಯುತ್ತಾನೆ. ತಿಳಿ, ಅರ್ಜುನ, ನನ್ನ ಭಕ್ತನಿಗೆ ಎಂದೆಂದೂ ನಾಶವಿಲ್ಲ.

## ಪಾತ್ರಗಳು

ಬುದ್ಧದೇವ

ಆನಂದ

ಅಂಗುಲೀಮಾಲ—ಕುಪ್ರಸಿದ್ಧನಾದ ದರೋಡೆಕಾರ.

ಏಕಾಕ್ಷ<br>ಬಲಿದಾಸ } ಅಂಗುಲೀಮಾಲನ ಅನುಚರರು

ಬುದ್ಧನ ಶಿಷ್ಯರು.

ಇಬ್ಬರು ದಾರಿಹೋಕರು

# ಅಂಗುಲೀಮಾಲ

## ದೃಶ್ಯ ೧

[ಬುದ್ಧದೇವ ತನ್ನ ಶಿಷ್ಯಪರಿವಾರದೊಂದಿಗೆ ಸಾವತ್ತಿ ನಗರವನ್ನು ಪ್ರವೇಶಿಸುತ್ತಿದ್ದಾನೆ. ಎಲ್ಲರಿಗಿಂತ ಮುಂದೆ ಬರುತ್ತಿದ್ದ ಶಿಷ್ಯರು ಹಾಡುತ್ತಿದ್ದಾರೆ.]

ಶಿಷ್ಯರು

ಬುದ್ಧ ಚಂದ್ರೋದಯದಿ
ಹಿಗ್ಗಿ ನಮ್ಮೆದೆ ಕಡಲು
ಶಾಂತಿ ಶೀಕರವನಿದೊ ಚೆಲ್ಲುತಿಹುದು—
ಜಗವ ಗೆಲ್ಲುತಿಹುದು!

ಇನ್ನಿಬ್ಬರು ಶಿಷ್ಯರು

ಸೂರು ಸಾಸಿರ ದಳದ
ಬುದ್ಧ ಪದ್ಮವು ಅರಳೆ
ಭಕುತ ಭೃಂಗವು ಬಂದು ಮುತ್ತುತಿಹುದು—
ಸುತ್ತ ಸುತ್ತುತಿಹುದು!

ಮತ್ತೆ ಮೊದಲ ಶಿಷ್ಯರು

ಜ್ವಾಲೆ ಮೇಲುದ ಹೊದೆದು
ಅಗ್ನಿದೇವನೆ ನಡೆದು
ಕರ್ಮ ಕಾನನವನ್ನು ದಹಿಸಲೆಂದು—
ನಡೆದು ಬರುವನಿಂದು!

[ಅಷ್ಟರಲ್ಲಿ ಬುದ್ಧದೇವ ರಂಗದ ಮಧ್ಯಕ್ಕೆ ಬರುತ್ತಾನೆ. ಜತೆಯಲ್ಲಿ ಆತನ ಶಿಷ್ಯ ಆನಂದ ಇದ್ದಾನೆ.]

ಬುದ್ಧ

ಅಂತರಂಗದ ಶಾಂತಿ ಬಹಿರಂಗದಲಿ ಅರಳಿ,
ಜಗದ ಮಾಯೆಗೆ ನಿಜದ ಪೂರ್ಣ ಭ್ರಮೆಯನು ಸಲಿಸಿ,

ಚಿತ್ತಕಾನಂದವನು ನೀಡುತಿಹುದಾನಂದ!
ಆ ಅಂದು, ವೈಶಾಖ ಪೂರ್ಣಿಮಾ ರಜನಿಯಲಿ,
ಹೃದಯಾಂತರಾಳದಲಿ ಚಿಲುಮೆ ಚಿಮ್ಮಿದ ಒಲುಮೆ
ಕಡಲಾಗುತಿದೆ ಇಂದು. ಅದೊ ಅಲ್ಲಿ ಹೂ ತುಂಬಿ
ಕುಣಿಯುತಿಹ ಲತೆಯಲ್ಲಿ, ಮರದ ರೆಂಬೆಯ ನೆಮ್ಮಿ
ಕುಕಿಲಿಡುತೆ ಸುಪ್ರಭಾತದ ಸೂರ್ಯರಶ್ಮಿಯಲಿ
ಮೈಯೊಡ್ಡಿ ನಲಿಯುತಿಹ ಹಕ್ಕಿ ಜೋಡಿಗಳಲ್ಲಿ
ಎಲ್ಲೆಲ್ಲು ಆ ಅದೇ ನಿರ್ವಾಣದನುಭೂತಿ
ಉಕ್ಕುತಿದೆ ಮತ್ತೆ ಮೈ ನವಿರೇಳುವಂತೆ!

## ಆನಂದ

ಶಾಂತಿ ತುಂಬಿದ ಹೃದಯ, ಒಲುಮೆ ತುಂಬಿದ ಹೃದಯ,
ನಿರ್ವಾಣದನುಭೂತಿ ಚಿಲುಮೆ ಚಿಮ್ಮುವ ಹೃದಯ
ಒಳ ಹೊರಗೆ ಚೇತನಾಚೇತನಗಳೆಲ್ಲರಲಿ
ಶಾಂತಿ ಒಲುಮೆಯನುಳಿದು ಬೇರೇನ ಕಾಣಬಹುದು?
ಶಾಂತಿಯಲ್ಲದೆ ಜಗಕೆ ಬೇರೇನ ನೀಡಬಹುದು?

## ಬುದ್ಧ

ಎಂಥ ಸುಂದರ ನಗರ ಸಾವತ್ತಿ, ಆನಂದ!
ನೋಡಲ್ಲಿ ಕೊಳದಲ್ಲಿ ಅಂಚೆಗಳ ಪರಿವಾರ
ಜೂಟಾಟವಾಡುತಿವೆ! ಇದೊ ಇಲ್ಲಿ, ವನದಲ್ಲಿ
ಸೂರ್ಯಕಾಂತಿಯ ಸುತ್ತ ಬಣ್ಣ ಬಣ್ಣದ ಚಿಟ್ಟೆ
ಒಂದನೊಂದನು ಅಟ್ಟಿ ಭ್ರಮಿಪ ಜೀವವ ಹೋಲಿ
ಎಂಥ ಚೆಲುವನು ಚೆಲ್ಲಿ ಹಾರಿಯೇ ಹಾರುತಿವೆ;
ಪಕ್ಷಿಕೂಜನದಿಂದ ಎದೆಯ ಶಾಂತಿಯು ಕೂಡ
ನಾದ ಮಾಧುರ್ಯದಲಿ ಮೀಯುತಿದೆ. ಓ ಕಂದ,
ಆನಂದ, ಇಂದೇಕೊ ಮತ್ತೆ ಶಿಶುವಾಗಿಹೆನು.

ಆನಂದ

ಅಹುದು ತಂದೆ, ಇಂದು ನಿಂದೆ
ಜಗದ ಸವಿಯ ಸವಿದು ಮತ್ತೆ
ಶಿಶುವಿನಂದದಿ!

ಚಲಿಪುದೆಲ್ಲ, ಜಗವು ಹೊಲ್ಲ
ಎಲ್ಲ ಮೋಹ ಎನ್ನಲಿಲ್ಲ
ಎಂದಿನಂದದಿ!

ಮುನ್ನ ನಿನ್ನ ಕಾಣಲಿಲ್ಲ
ಇಂದಿನಂದದಿ!

ಬುದ್ಧ

(ಕೋಟೆಯ ಕಡೆ ಕೈದೋರುತ್ತ)

ನೋಡು ನೋಡಾನಂದ. ಆ ಸೈನಿಕರ ವೃಂದ
ಎನಿತೊಂದು ಬಗೆ ಬಗೆಯ ಶಸ್ತ್ರಾಸ್ತ್ರಗಳ ಹಿಡಿದು
ಕೋಂಟೆ ಪಕ್ಕದಲಿ ಪಡಿ ಕೋಂಟೆಯನು ಕಟ್ಟಿದೊಲು
ದಟ್ಟೈಸಿ ನಿಂದಿಹುದು. ಅಗೊ ನೋಡು ಆನಂದ,
ಅವರ ತಲೆಯನು ನೋಡು. ಅರಮನೆಯ ಕಳಶವನು
ತಂದು ನಿಲಿಸಿಹರೆನಲು ತಲೆಯ ತೊಡುಗೆಯ ಶಿಖರ!
ಖಡ್ಗದಲಿ, ಭಲ್ಲೆಯಲಿ, ಕೈಗಳ ಗುರಾಣಿಯಲಿ
ಎನಿತೊ ಸೂರ್ಯರು ಹೊಳೆದು, ಸೂರ್ಯರನೆ ತೊಡವಾಗಿ
ರಚಿಸಿಹರೊ ಎಂಬಂತೆ ಕಾಣುತಿದೆ. ಶ್ರಾವಸ್ತಿ-
ಗೇತಕಿಂತಹ ರಕ್ಷೆ? ಪಸೆನದಿಗೆ ಶತ್ರುಗಳ
ಭೀತಿಯೆ? ಯಾರು ಆ ಶತ್ರುಗಳು ಆನಂದ?
ಬಿಂಬಸಾರಗು ಇವಗು ಯುದ್ಧ ಮೈದೋರಿದುದೆ?

ಆನಂದ

ಅಲ್ತಲ್ತು ಗುರುದೇವ. ಶಾಂತಿಪ್ರಿಯ ಪಸೆನದಿಗೆ
ಯುದ್ಧಭಯ ಇನಿತಿಲ್ಲ. ಸುತ್ತಲಿನ ರಾಜರೋ
ಆಪ್ತಮಿತ್ರರು ಇವಗೆ.

ಬುದ್ಧ

ಮತ್ತೇಕೆ ಆನಂದ, ಮೃತ್ಯುಭೀತಿಯು ತೋರಿ
ಸೆಡೆತು ನಿಂತಿಹರಿವರು ಈ ರಾಜಭಟರು?

ಆನಂದ

ಅಂಗುಲೀಮಾಲನೆಂಬೊಂದು ಹೆಸರನು ನೀನು
ಕೇಳಿ ಬಲ್ಲೆಯ ತಂದೆ?

ಬುದ್ಧ

ಏನು ಹೆಸರದು ಕಂದ?
ಸ್ಮಿತರುಚಿಯ ಮನಮಾತ್ರ ಅಚ್ಚರಿಯ ತಳೆದರೂ
ತನುವಿದಿಗೊ ರೋಮಾಂಚ ಕಂಚುಕವ ಧರಿಸುತಿದೆ!
ಶಿಶಿರಪ್ರಭಾತದಲಿ ಗಂಗೆ ಸಲಿಲದಿ ಮಿಂದ
ಮೊದಲಚಣದನುಭವವು ಆಗುತಿದೆ ಆನಂದ.
ಏನು ಹೆಸರದು ಕಂದ? ಕಡಿದ ಕೈಬೆರಳುಗಳ
ಮಾಲೆ ಧರಿಸಿಹನೇಸು?

ಆನಂದ

(ಕಾತರದ ದನಿಯಲ್ಲಿ)

ಎಂತರಿತೆ ನೀ ತಂದೆ?

ಬುದ್ಧ

ಬಿನದಕೆಂದೆನು ನಾನು; ದಿಟವಾಯ್ತೆ ಆನಂದ?
ಮನಜಕುಲದೆದೆಯಲ್ಲಿ ರುದ್ರನಾಟ್ಯವ ನಟಿಪ
ಕೊಲೆಯ ಪೈಶಾಚಿಕತೆ ಅಂಗುಲೀ ಮಾಲನೊಲು
ಮೈದಳೆದು ಬಂದಿಹುದೆ? ಅವನಾರು ಆನಂದ?

ಆನಂದ

ಮುನ್ನಿಸೆನ್ನನು ತಂದೆ. ಆ ನರಾಂತಕ, ಜನದ
ಶಾಂತಿಯನು ಸುಡುಗಾಡನಾಗಿಸಿಹ ವಾರ್ತೆಯನು
ಬೇಕೆಂದೆ ಬೈತಿಟ್ಟೆ ನಿನ್ನಿಂದೆ.

ಬುದ್ಧ

ಹೇಳು ಹೇಳಾನಂದ. ಕೇಳ್ವಕೌತುಕ ನನಗೆ.
ತಳುವದೆಯೆ ನುಡಿ ನೀನು. ಜನದೆದೆಯೆ
ನನ್ನೆದೆಯು.

ಆನಂದ

ನಡೆ ತಂದೆ. ಉಪವನದ ಹಿರಿಯಸುಗೆ ನೆಳಲಿನಲಿ
ಕುಳಿತುಕೇಳುವೆಯಂತೆ.

[ಇಬ್ಬರೂ ಹೊರಡುವರು. ಮೊದಲು ಹಾಡಿದವರ ದನಿ ಮತ್ತೆ ದೂರದಿಂದ ಕೇಳಿಬರುತ್ತದೆ.]

ಬುದ್ಧ ಚಂದ್ರೋದಯದಿ
ಹಿಗ್ಗಿ ನಮ್ಮೆದೆ ಕಡಲು
ಶಾಂತಿ ಶೀಕರವನಿದೊ ಚೆಲ್ಲುತಿಹುದು-
ಜಗವ ಗೆಲ್ಲುತಿಹುದು !

ಇನ್ನಿಬ್ಬರು ಶಿಷ್ಯರು

ಬೆಂದೆದೆಯ ತೋಯಿಸಲು
ಬೆಳುದಿಂಗಳಿನ ಹೊನಲು
ಹರಿದು ಬರುತಿಹುದಿದಿಗೊ ಬುದ್ಧರೂಪಿ-
ಪರಮ ಶುದ್ಧರೂಪಿ !

[ತೆರೆ]

## ದೃಶ್ಯ ೨

[ಸಾವತ್ಥಿಯ ಜೇತವನ, ದೊಡ್ಡ ಅರಳಿಯ ಮರದಡಿಯ ಉನ್ನತಾಸನದ ಮೇಲೆ ಬುದ್ಧದೇವ ಮಂಡಿಸಿದ್ದಾನೆ. ಬಳಿಯೇ ಆನಂದ ನಿಂತಿದ್ದಾನೆ. ಸುತ್ತ ಬುದ್ಧನ ಅನೇಕಮಂದಿ ಶಿಷ್ಯರು ಕುಳಿತಿದ್ದಾರೆ.]

ಬುದ್ಧ

ಹೇಳು ಹೇಳಾನಂದ, ಮನವಿದಿಗೊ ಕೌತುಕದ
ಸೂಜಿಮೊನೆಗೇರುತಿದೆ. ಯಾರು ಅಂಗುಲಿಮಾಲ ?
ಇರವೆಲ್ಲಿ ? ತಳುವದೆಯೆ ನುಡಿಕಂದ.

ಆನಂದ

ಅದೊ ಅಲ್ಲಿ, ಸನಿಹದಲಿ, ಭಯಚಕಿತ ನಾಗರಿಕ
ಹರಿಣವನು ಸೀಳುವೊಲು ಬಂಡೆಪಂಜವನೆತ್ತಿ
ವೃಕ್ಷಮೀಸೆಯ ಕೆದರಿ, ದೃಷ್ಟಿಯಲುಗದೆ ನೋಡಿ
ಹೊಂಚುತಿದೆ ಗಿರಿಯೊಂದು ; ಅದರ ಗುಹೆ ಮನೆಯವಗೆ.
ಅವನೆಲ್ಲಿ ಜನಿಸಿದನೊ ಮೇಣೆಲ್ಲಿ ಬಳೆದನೋ
ಅರಿತವರ ಕಾಣೆ ನಾ. ಆದರಿನಿತೊಂದು ದಿಟ.
ಮನುಜರೆದೆ ರಕುತವನೆ ಪೀಯೂಷವನೆಗೈದು
ಎಳಮೆಯಿಂದಲು ಅವನ ಪೋಷಿಸಿರಲೇ ಬೇಕು
ಮಾತೃರೂಪದ ಯಾವ ಕಂಟಕಿಯೊ ಆ ತಾಯಿ.
ರುಂಡ ಮೇಣೆಲಬುಗಳು ಅವನ ಕ್ರೀಡಾವಸ್ತು !
ಮೌನದಲಿ ನಿದ್ರಿಸಿಹ ಅಗ್ನಿ ಪರ್ವತವೊಮ್ಮೆ
ಹೂಂಕರಿಸಿ ಬಾಯ್ದೆರೆದು ಅಗ್ನಿಪೂರವ ಸುರಿದು
ಕಾಡುನಾಡೆಲ್ಲವನು ಮಸಣಗೈಯುವ ತೆರದಿ
ಇದ್ದಕಿದ್ದಂತೆಯೇ ಗಿರಿಯ ಗುಹೆಯಿಂ ಚಿಮ್ಮಿ
ಯಾವುದೋ ನಿರ್ಭಾಗ್ಯ ನಗರಿಯನು ಮೃತ್ಯುವನು
ಹಿರಿದ ಕತ್ತಿಯ ಝಳಪಿ ಕಾಲಭೈರವನಂತೆ.

ಪ್ರಳಯ ತಾಂಡವಗೈದು ವಿಲಯದೊಳಗದ್ದುವನು
ಕಂಡವರನೆಲ್ಲರನು. ತಾಯೆದೆಯನಪ್ಪಿರುವ
ಎಳೆಶಿಶುವೊ, ಒಲುಮೆಯಲಿ ಮೈಮರೆತ ಪ್ರೇಮಿಗಳೊ,
ಬಾಳ ತುದಿಗೈದಿಯೂ ಮೃತ್ಯುವಿಗೆ ಅಂಜುತಿಹ
ಮುದಿಜನರೊ ಯಾರಾದರೇನಂತೆ ಅವನಿಗೊಂದೇ.
ಬಳಿಸಾರ್ದು ಕೊಲೆಗೈದು, ಕೈಬೆರಳ ಕತ್ತರಿಸಿ
ವಿಕಟಾಟ್ಟಹಾಸದಲಿ ಮಾಲೆ ಸೂಡುವನವನು.
ನಾಳೆ ಈ ಸಾವತ್ತಿಗೈತರುವ ಸುದ್ದಿಯಿದೆ.
ಅದರಿಂದಲೇ ದೇವ, ನಗರಕಿಂದೀ ರಕ್ಷೆ.

ಬುದ್ಧ

ಅಚ್ಚರಿಯು ಜಗದಂದ ಆನಂದ. ಅಚ್ಚರಿಯ
ಚಿತ್ರಶಾಲೆಯು ಲೋಕ. ಒಂದೊಂದೆ ತೆರೆ ಸರಿಯೆ
ಅದರ ಹಿಂದಣ ದೃಶ್ಯ ದಿನದಿನವು ಹೊಸಹೊಸತು
ಅನುಭವವ ತರುತಲಿದೆ ಹೃದಯಕ್ಕೆ. ಎದೆಯಲ್ಲಿ
ಬೆಳಗುತಿಹ ಬೆಳಕೊಂದೆ. ಅದರ ಸುತ್ತಲು ಸುತ್ತಿ
ವೈವಿಧ್ಯ ಭ್ರಾಂತಿಯನು ಕವಿಸುತಿಹ ಜವನಿಕೆಗ-
ಳೆನಿತೊಂದು, ಆನಂದ!

ಆನಂದ

ದುಃಖದಗಲವ ಕಂಡೆ ನಿನ್ನ ಕೃಪೆಯಿಂ ತಂದೆ.
ಆದರೇನ್? ಕಾಣೆ ನಾನ್ ಮನುಜನೆದೆ ಕ್ರೌರ್ಯದೊಂ-
ದಾಳವನು. ಪಾತಾಳದಾಳವನು ಮೀರಿತದು. ನಿಲ್ಲದೆಯೆ
ಮೀರಿ ಇಳಿಯುತ್ತಿಹುದು. ನಿಲುವುದೆಂದೋ ಕಾಣೆ.
ನಿಲುವುದೋ ಇಲ್ಲವೋ ಅದುವೆ ಕಳವಳವೆನಗೆ.

ಬುದ್ಧ

ನಿಲ್ಲುವುದು ಆನಂದ. ಇಂದಲ್ಲ ನಾಳೆದಿನ,
ಅಲ್ಲದಿರೆ ಎನಿತೊ ಯುಗಗಳ ಬಳಿಕ, ಕೊಲ್ಲುತಿಹ

ಕೈಗಳಿವು ಕೊಲೆಯ ಕಲೆಯನು ಮರೆತು ಒಂದೊಂದು
ಜೀವವನು ಪೂಜಿಪುದನರಿಯುವುದು ಆನಂದ.
ಇಂದಲ್ಲದಿರೆ ನಾಳೆ ತನ್ನ ಕೃತ್ಯಕೆ ತಾನೆ ನಾಚುವುದ
ಕಲಿಯುವನು ಮಾನವನು. ಅದುವರೆಗು ಶಾಂತಭಾ-
ವವತಳೆದು ಎದೆಯೊಲವನೇ ನಂಬಿ ಜೀವಜೀ-
ವದ ಬಳಿಗೆ ಪ್ರೇಮಯಾತ್ರೆಯ ನಡೆದು ಒಲಿವುದನು
ಕಲಿಸುವುದು ಪರಮಪೂಜೆಯು ನಮಗೆ. ಆನಂದ
ಭಿಕ್ಷಾ ಪಾತ್ರೆಯನು ತಾ. ಅಂತೆ ಕಮಂಡಲನು.

ಆನಂದ

(ಸ್ವಲ್ಪ ಕಾತರತೆಯನ್ನು ಸೂಸಿ)

ಪಯಣವೆಲ್ಲಿಗೆ ತಂದೆ?

ಬುದ್ಧ

ಅಂಗುಲೀಮಾಲನಿರುವಲ್ಲಿಗೆ.

ಆನಂದ

ಏನೆಂದೆ ಭಗವಂತ?

ಬುದ್ಧ

ಕೊಲೆಗಡುಕನೆಂದು ನೀನಿದುವರೆಗು ಬಣ್ಣಿಸಿದ
ಒಲುಮೆಯೆದೆಯಿರುವೆಡೆಗೆ.

ಒಬ್ಬ ಶಿಷ್ಯ

ಮೃತ್ಯುಗುಹೆಗೇನ್!

ಬುದ್ಧ

ಸಾವು ಬದುಕುಗಳಲ್ಲಿ ಭೇದವೇ ಕಂಡ?

ಮತ್ತೊಬ್ಬ ಶಿಷ್ಯ

ಆಗದಾಗದು ತಂದೆ. ಬೇಕೆಂದೆ ಮೃತ್ಯುವನು
ಅರಸಿ ನಡೆವುದು ತಗದು.

ಬುದ್ಧ

ಮೃತ್ಯುವೋ ಅಮೃತವೋ ಎಂತರಿವೆ ನೀನದನು ?

ಶಿಷ್ಯ

ನಾ ಬಲ್ಲೆ ಗುರುದೇವ. ಅವನ ಹೆಸರನೆ ಕೇಳಿ
ಎದೆಯೊಡೆದು ಮಡಿದವರು ಎನಿತೊ ಜನ. ಸಂಶಯವೆ
ಅದರಲ್ಲಿ ? ಹೋಗಲಾಗದು ತಂದೆ.

ಎಲ್ಲರೂ

ಹೋಗಲಾಗದು ತಂದೆ, ಹೋಗಲಾಗದು ತಂದೆ.

ಬುದ್ಧ

ನಡೆದೆ ನಡೆವೆನು ನಾನು : ತಾಯಿಹಸು, ಕಾಡಿನಲಿ
ಹಸುರ ಮೇಯಲು ಹೋಗಿ ಸಂಜೆಯಾದರು ಇನ್ನು
ಹಿಂದಕೈತರದಿರುವ ಎಳೆಗರುವನರಸುತ್ತೆ
ನಡೆವಂತೆ, ನಡೆದೆ ನಡೆವೆನು ನಾನು.

ಮತ್ತೊಬ್ಬ ಶಿಷ್ಯ

ಕರುವಲ್ತು ಗುರುದೇವ, ಹಿರಿಯ ಹುಲಿ.

ಬುದ್ಧ

ನನ್ನೆದೆಯ ಆಳದಲಿ ನಡೆಯುತಿರುವದ್ಭುತವ
ಎಂತರಿಯುವೈ ಕಂದ ? ಸಕಲ ಪ್ರಕೃತಿಯ ಕ್ಷುಬ್ಧ

ಶಕ್ತಿ ವೈವಿಧ್ಯಗಳು ಒಂದಾಗಿ ಹಾಡುತಿವೆ
ಸಾಮಾನ್ಯ ಕರ್ಣಗಳ ಕೇಳಿಕೆಯ ಮೀರಿರುವ
ಕರುಣೆಯಾಕ್ರಂದವನು. ಚಿರಕಾಲ ಸೆರೆಯಾಗಿ
ಮುಕ್ತಿಯನು ಹಾರೈಸಿ ನರಳುತಿಹ ಸಾಗರವೊ,
ಬೆಂಕಿಯೊಡಲಿಂ ಜನಿಸಿ ದಿನದಿನವು ಬೇಯುತಲಿ
ಕರುಣೆಮಳೆಯನು ಬಯಸಿ ತಲೆಯೆತ್ತಿ ನೋಡುತಿಹ
ಮರುನೆಲವೊ, ಪಥ ತಪ್ಪಿ ಉರುಳುರುಳಿ ಇನ್ನೇನು
ಸಿಡಿಯಲಿಹ ಗಗನ ನೀಹಾರಿಕೆಯೊ, ಮೇಣಿವೆಲ್ಲವು ಸೇರಿ
ಒಂದೆ ಸಂಚನು ಹೂಡಿ ಹೊಮ್ಮಿಸಿಹ ರೋದನವೊ
ನನ್ನೆದೆಯನೆಳೆಯುತಿವೆ ತಮ್ಮೆಡೆಗೆ. ಕೇಳಿರೈ
ಕಂದರಿರ. ಜನದೆದೆಯ ಯಾತನೆಯ ಆಭೀಳ
ನಿಃಶ್ವಾಸ ಕ್ಷಣಕಾಲ ಉಲ್ಲೋಲ ಕಲ್ಲೋಲ-
ಗೊಳಿಸಿತ್ತೈ ಶಾಂತಿಸಾಗರವನ್ನು. ಚಣಕಾಲವಾದರೂ
ಒಂದಾದಮೇಲೊಂದು ಅಲೆಗಳಿವೊ ಬಡಿಯುತಿವೆ
ದಡವನ್ನು. ಹಿಂದಣಿಂದರಿಯುವಿರಿ ಇದರರ್ಥ-
ವನು ನೀವು. ಈಗಳೋ ಒಂದೆ ಜೀವದ ಮೇಲ್ಮೆ
ಪರಮತಪವೆನಿಸುವುದು. ನಡೆದೆ ನಡೆವೆನು ನಾನು
ಆ ನನ್ನ ಸೋದರನ ವಿಪಿನದರಮನೆ ಬಳಿಗೆ.

### ಒಬ್ಬ ಶಿಷ್ಯ

ಒಂದು ಜೀವದ ಮೇಲ್ಮೆ. ಕೋಟಿ ಜೀವದ ಪತನ.
ಹಿರಿಯ ಜ್ಯೋತಿಯು ಈಗ ಕಾನನಕೆ ನಡೆಯುತಿದೆ.
ಬೆಳಕ ಪಡೆಯುವೆವೆಂದು ಅದರ ಬಳಿಗೈತಂದು
ಜೀವ ಸರ್ವಸ್ವವೂ ಎಣ್ಣೆಬತ್ತಿಗಳಾಗಿ
ಬೆಳಕ ಪಡೆದೇವೆಂದು ಕಾದು ನಿಂದಿರುವಂದು
ಹಿರಿಯ ಜ್ಯೋತಿಯು ಈಗ ಕಾನನಕೆ ನಡೆಯುತಿದೆ.
ಚಂದ್ರಮಂಡಲದೆದೆಯು ರವಿಕಿರಣವನು ಬಯಸಿ

ಅಗಲಾಗಿ ತೆರೆದಂದು ಶಾಶ್ವತದ ಅಸ್ತಮಾ-
ನವ ಬಯಸಿ ನಡೆಯುತಿದೆ ನಿರ್ವಾಣ ರವಿಬಿಂಬ!

ಬುದ್ಧ

ಏನು ಮಾತಿದು ಕಂದ? ಇದುವರೆಗೆ ನೀನರಿತ
ಅರಿವಿನಾಳವು ಇದುವೆ? ಎಂಥ ಮೋಹವು ನಿನಗೆ!
ತಾಯ್ತಂದೆ ಮನೆಮಂದಿ ಪರಿವಾರ ಐಶ್ವರ್ಯ
ಅಭಿಮಾನ ಸರ್ವಸ್ವವನು ಉಳಿದು ಕೇವಲದ
ಶಾಂತಿಯನು ಕೇವಲದ ಒಲವನ್ನು ಅರಸುತ್ತೆ
ಐತಂದ ನಿಮಗಾದರೂ ಇಂಥ ಗುರುಮೋಹ
ಕವಿದುದೇ? ಅಚ್ಚರಿಯು ಜಗದಂದ ಆನಂದ!
ನಾನು ಸಾಯುವೆನೆಂದೆ? ಮೃತ್ಯುವಿನ ಅರ್ಥವನು
ಜೀವನದ ಅರ್ಥವನು ಅರಿಯದಿಹ ಆ ಶಿಶುವು
ನನ್ನ ಕೊಲ್ಲುವುದೆಂದೆ?

ಒಬ್ಬ ಶಿಷ್ಯ

ಸಂದೇಹವೇ ತಂದೆ? ಉರಿಯ ನಾಲಗೆಯೆತ್ತಿ
ವನವೆಲ್ಲವನು ಮುತ್ತಿ ಆಪೋಶನಂಗೊಳುವ
ಕ್ರೂರ ದಾವಾನಲಕೆ ಶ್ರೀಗಂಧ-ಗೊಬ್ಬಳಿಯ
ಭೇದದರಿವಾಗುವುದೆ?

ಬುದ್ಧ

ಶ್ರೀಗಂಧ ದಹಿಸಿದರು ಕಂಪ ಸೂಸಿಯೆ ತಾನು
ಉಳಿವುದಲ್ಲವೆ ಕಂದ?

ಒಬ್ಬ ಶಿಷ್ಯ

ಆಗದಾಗದು ತಂದೆ. ಶ್ರೀ ಬುದ್ಧ ಜೀವರವಿ
ರಾಹುವದನವನಿಂದೆ ಹೊಗುವುದನು ಕಾಣಲಾ-
ರೆವು ನಾವು. ಕಂಡುಮೇಣ್ ಬದುಕಲಾರೆವು ನಾವು.

ಬುದ್ಧ

ಪ್ರಿಯಶಿಷ್ಯ ಆನಂದ. ಮಾತು ಮುಗಿಯಿತು ಇನ್ನು.
ನಡೆದೆ ನಡೆವೆನು ನಾನು. ಎಲ್ಲಿ ತಾ ಕಮಂಡಲನು.

ಆನಂದ

ಹಿಮಗಿರಿಯ ಸುಸ್ಥಿರತೆ ನಿನ್ನೆದೆಯ ನಿರ್ಧಾರ.
ಮೇಣಲ್ಲಿ ಜನಿಸಿದುದೆ ಈ ಕಾರುಣ್ಯಗಂಗೆ.
ಆದರೂ . . . ಆದರೂ . . .

ಬುದ್ಧ

ಆದರೂ . . . ಏನು ಅದು ಆನಂದ ?

ಆನಂದ

ಬರಿ ಬಯಲ ಭಯದಲ್ಲಿ ಕಂಪಿಸಿತು ಭಕ್ತರೆದೆ
ಎನ್ನದಿರು ಗುರುದೇವ. ಎನಿತೊ ಸಲ ಶಸ್ತ್ರಾಸ್ತ್ರ
ಸಜ್ಜಿತರಸಂಖ್ಯ ಸಂಖ್ಯೆಯಲಿ ಅಂಗುಲೀ-
ಮಾಲನನು ಹಿಡಿತರುವ ಸಾಹಸಕೆ ಜೀವವನೆ
ಪಣವಿಟ್ಟು ನಡೆದರೈ. ಆದರಯ್ಯೊ ನಡೆದರಷ್ಟೆ,
ಅಗ್ನಿಪರ್ವತದೊಡಲ ಸಾರ್ದಂತೆ !

ಬುದ್ಧ

ಮೃತ್ಯು ಭೀತಿಯನು ಎದೆಯ ನೆಲದಿಂದ
ಕಿತ್ತು ನಡೆದರೇ ಆನಂದ ?

ಆನಂದ

ಇಲ್ಲ ತಂದೇ.

ಬುದ್ಧ

ಹೃದಯ ಕಳಶದಲಿ ಪ್ರೇಮದಮೃತವನು
ತುಂಬಿ ನಡೆದರೇ ಆನಂದ?

ಆನಂದ

ಇಲ್ಲ ತಂದೇ . . .

ಬುದ್ಧ

ಇದೊ ಈಗ, ಓ ಕಂದ, ತೆರಳುತಿಹೆನೊಬ್ಬನೇ.
ನಿರ್ಭೀತ ಹೃದಯದಲಿ ಪ್ರೇಮವೊಂದನೆ ತುಂಬಿ
ಪ್ರೇಮವೊಂದನೆ ನಂಬಿ ತಾಯಿಮಡಿಲನ್ನೆಂತೊ
ಅಂತೆ ಹೊಗುವೆನು ನಾನು ಪರ್ವತಾರಣ್ಯವನು.

ಆನಂದ

ವಿಧವಿಧದ ಬಂಧನದಿ ಸಿಲುಕಿರುವ ನಮ್ಮ ಮನ
ಎಂತರಿಯಬಹುದಯ್ಯ ಮತಿಯಾಚೆಗಿರುವುದನು?
ನಿನ್ನಾಜ್ಞೆಪಾಲನೆಯೆ ಪರಮತಪವೆಮಗೆಂಬೆ.

[ಬುದ್ಧನ ಕೈಗೆ ಭಿಕ್ಷಾಪಾತ್ರೆ ಕಮಂಡಲುಗಳನ್ನು ನೀಡುತ್ತಾನೆ. ಬುದ್ಧದೇವ ಅವುಗಳನ್ನು ಸ್ವೀಕರಿಸಿ ಒಮ್ಮೆಯಾದರೂ ಹಿಂದಿರುಗಿ ನೋಡದೆ ಮಂದಸ್ಮಿತನಾಗಿ ಗಂಭೀರಭಾವದಿಂದ ನಡೆಯುತ್ತಾನೆ.]

ಶಿಷ್ಯರ ಗುಂಪಿನಿಂದ ಒಂದು ದನಿ

ಬುವಿಯ ಪುಣ್ಯಮೈದಳೆದು ಬಂದ ರವಿ
ಅಪರ ಸಾಗರವ ಸೇರಿತೋ . . .

ಆನಂದ

ತಮದ ತಿಮಿರ ಕುಹರವನ್ನು ಬೆಳಗಲೆಂದು
ಸಾರಿತೋ . . .

ಮತ್ತೊಂದು ದನಿ

ಜೀವರಾಶಿಗಳ ಪಾಪಪುಂಜವನು
ತೊಳೆವ ಗಂಗೆಯಿದು ಬತ್ತಿತೋ . . .

ಆನಂದ

ನರಕದಾಳದಲ್ಲಿ ನವೆವ ಜೀವಿಗಳನು
ಎತ್ತಿತೋ.

ಎಲ್ಲರೂ

ಓ ಕಾನೆ, ಓ ಬಾನೆ, ಓ ಗಿರಿಯೆ, ಓ ರವಿಯೆ
ಓ ದಿಗ್ದಿಗಂತ,
ಜಗದ ಪುಣ್ಯದ ಹಣ್ಣು, ನಮ್ಮ ಹೃದಯದ ಕಣ್ಣು
ನಮ್ಮ ಭಗವಂತ,
ನಡೆವನದೊ ದೂರದಲಿ ಕಾನನದ ಸಿಂಹದೊಲು
ಶ್ರೀಪುಣ್ಯವಂತ !
ಈ ಜಗದ ಜ್ಯೋತಿಯನು ಉಜ್ಜ್ವಲಿಸಿ ಕಾಪಿಡಲು
ತೊಡಿ ನೀವು ಪಂತ !

ಬುದ್ಧಗೆ ಜಯ ಶುದ್ಧಗೆ ಜಯ
ಜಯ ಜಗದಾರಾಧ್ಯನಿಗೆ !
ಮನದಾಚೆಯ ಮಹಮೋನದ
ಆನಂದ ಸುವೇದ್ಯನಿಗೆ !
ಬುದ್ಧಗೆ ಜಯ ಶುದ್ಧಗೆ ಜಯ
ಜಯ ಜಗದಾರಾಧ್ಯನಿಗೆ !

[ತೆರೆ]

## ದೃಶ್ಯ ೩

[ಕಾಡು. ಸಂಜೆ ನಿಧಾನವಾಗಿ ಇಳಿಯುತ್ತಿದೆ. ಗುಹೆಯ ಮುಂದೆ ಅಂಗುಲೀಮಾಲ ಇಬ್ಬರು ಅನುಚರರೊಡನೆ ಕುಳಿತಿದ್ದಾನೆ. ನರಕವೇ ಮೈದಳೆದಂತೆ ರೂಪು. ನರರೆಲುಬಿನಿಂದ ಮಾಡಿದ ಕಿರೀಟ. ಕೈಬೆರಳುಗಳ ಮಾಲೆ ಕತ್ತಿನಲ್ಲಿ ಜೋಲಾಡುತ್ತಿದೆ. ಹಿಂದ ಇಬ್ಬಾಯ ಕತ್ತಿಯನ್ನು ಒಮ್ಮೆ ಅತ್ತ ಒಮ್ಮೆ ಇತ್ತ ಬೀಸುತ್ತಿದ್ದಾನೆ.]

ಅಂಗುಲೀಮಾಲ

ನಾನಲ್ತೆ ಚಕ್ರವರ್ತಿ, ಇಹಲೋಕ ಸಾರ್ವಭೌಮ!
ನರರೆದೆಯು ಮಣಿಯುವುದು ರಾಜರಿಗೆ. ರಾಜರೋ
ನಾ ಬರುವ ಶುಭವಾರ್ತೆಯನು ಕೇಳಿ ನಡನಡುಗಿ
ಕಪ್ಪಕಾಣಿಕೆವಿಡಿದು ಕೈಬೆರಳುಗಳ ಮರೆಸಿ,
ನಿದ್ದೆ ಭೋಜನವುಳಿದು ಮೃತ್ಯುಸೂಕ್ತವ ಪಠಿಸಿ,
ತೆರೆದ ಕಣ್ ತೆರೆದಂತೆ ಅರೆಸತ್ತು ನಿಲ್ಲುವರು.
ನಾನವರ ಬಳಿಸಾರಿ ನಿಂತೊಡನೆ ಮೃತ್ಯುವನೆ
ಕಂಡಂತೆ ಚೀರುವರು.

(ಕೈಯ ಕತ್ತಿಯನ್ನು ಹಣೆಗೆ ಮುಟ್ಟಿಸಿಕೊಂಡು)

ಈ ಖಡ್ಗ ಕಾಳಿಗೋ
ಅರಸುಗಳ ಕೊರಳುಗಳ ರಂಗದಲಿ ನರ್ತಿಸುವ
ವೈಭವದ ಪೆರ್ಬಯಕೆ! ಸಲಿಪೆನೌ, ಮಾತಾಯಿ,
ಅಂಗುಲೀಮಾಲನೀ ಧಮನಿ ಧಮನಿಗಳಲ್ಲಿ
ವೀರತೇಜದ ರಕ್ತ ಹರಿಯುತಿರುವನ್ನೆಗಂ,
ಆ ನಿನ್ನ ಬಯಕೆಯನು! ಅರಸರರಸಾಗಿಯೂ
ರಾಜ್ಯವನು ಕೋಶವನು ಪದವಿ ವೈಭವಗಳನು
ಅನಿತೇಕೆ, ತೃಣಕಣವನೊಂದನೂ ಒಲ್ಲೆನಾ.
ಒಂದೆ ಬಯಕೆಯು ನನಗೆ. ನರಶಿರವ ಚೆಂಡಾಡಿ
ನಿನ್ನಡಿಯಲೀಡಾಡಿ ನೋಡಿ ಸುಖಿಸುವ ಬಯಕೆ.

ಓ ದೇವಿ, ಪ್ರಸಾದವೋ ಎಂಬಂತೆ ಕೈಬೆರಳ
ಪಾಲೆನಗೆ! ಅಂಗುಲಿಯು ಕತ್ತರಿಸಿ ಮಾಲೆಸೂ-
ಡುವ ಸೊಗಕೆ ಸ್ವರ್ಗವೂ ಅಪ್ರಿಯವು ಎನಿಸುತಿದೆ.

(ಪಕ್ಕದಲ್ಲಿ ಕುಳಿತಿದ್ದ ಅನುಚರನ ಕಡೆ ತಿರುಗಿ)

ಸಾವತ್ತಿಯಾಕ್ರಮಣಯಜ್ಞಕ್ಕೆ ನಾಳೆಯೆ ಮುಹೂರ್ತ;
ನೆನಪಿದೆಯೆ, ಏಕಾಕ್ಷ?

ಏಕಾಕ್ಷ

ಅಹುದೊಡೆಯ. ನಾಳೆಯೇ ಮಹನವಮಿ.

ಅಂಗುಲೀಮಾಲ

ಮಹನವಮಿ! ಗೆಲ್ಲು ತಾಯಿಯೆ ಗೆಲ್ಲು! ಪಸೆನದಿಯ
ರಾಜಶಿರ ದಾಸವಾಳದ ಪೂಜೆ ಸಲ್ಲುವುದು
ನಿನ್ನ ಪಾದಕೆ ನಾಳೆ. ಇನ್ನೆನಿತೆನಿತೊ ರಾಜ—
ಮಕುಟಗಳ ಮಣಿಕಾಂತಿ ನಿನ್ನಡಿಯ ಬಾನನ್ನು
ಇಂದ್ರಧನುವಿನೊಲು ಸಿಂಗರಿಸಲಿದೆ. ಇರು ತಾಯಿ
ಒಂದಿರುಳು. ಬಳಿಕ ಮಾರಣ ಹೋಮ. ಹಳೆಯ ಅಂ-
ಗುಲಿಮಾಲೆ ಬೇಸರಾಯಿತು ನನಗೆ. ಹೊಚ್ಚಹೊಸ
ಅಂಗುಲೀಮಾಲನಾಗುವೆ ನಾಳೆ.

(ಇದ್ದಕ್ಕಿದ್ದಂತೆಯೇ ಎದ್ದುನಿಂತು ಬೆರಳು ತೋರಿಸಿ)

ಏಕಾಕ್ಷ, ನೋಡದೋ, ಯಾವುದೋ ನರಪ್ರಾಣಿ
ಇತ್ತಲೇ ಬರುತಲಿದೆ.

ಏಕಾಕ್ಷ

ಅಹುದೊಡೆಯ.

ಅಂಗುಲೀಮಾಲ

ಏಕೆ ಬಹನೋ ಏನೊ, ಈ ಅಪರ ಸಮಯದಲಿ.
ಅದೊ ನೋಡು ಬಡಗಲಲಿ ಕೆನ್ನಾಲಗೆಯ ಚಾಚಿ

ಮಾಕಾಳಿ ಸೃಷ್ಟಿಯನೆ ನೋಣೆಯುವೊಲು ತೋರುತಿದೆ.
ಬೆಂಗಡೆಗೆ ಅವಳ ಮುಡಿಯನೆ ಹೋಲಿ ಕಾಳ್ಗಪ್ಪು ಕವಿಯುತಿದೆ.
ಇಂಥಲ್ಲಿ ಬಹನೇಕೆ? ಬದುಕು ಬೇಸರವಾಯ್ತೆ?
ಸಾವಾಸೆ ಹೆಚ್ಚಿರಲು ಸುಲಭದಲಿ ಮರಣವನು
ಒಲಿಸುವ ಉಪಾಯವನು ಕಾಣದಾದನೊ ಇವನು!

ಬಲಿದಾಸ

ಪಸೆನದಿಯು ಅಟ್ಟಿರುವ ಗೂಢಚಾರನೊ ಏನೊ!

ಅಂಗುಲೀಮಾಲ

(ನಗುತ್ತಾ)

ಸಿಂಹದುಗ್ರಾಣದಲಿ ಇರುವ ವಸ್ತುವನಳಿಯೆ
ಜಂಬುಕನು ವೃಷಭವನು ಅಟ್ಟಿದಂತೆಯೆ ಆಯ್ತು!

(ಮೂರು ಜನವೂ ಕೈ ಚಪ್ಪಾಳೆಯಿಕ್ಕಿ ಕೇಕೆ ಹಾಕಿ ನಗುತ್ತಾರೆ. ಬುದ್ಧದೇವ ಪ್ರವೇಶಿಸುತ್ತಾನೆ.)

ಅಂಗುಲೀಮಾಲ

ನಿಲ್ ಅಲ್ಲೆ ಓ ಮನುಜ, ಅಲ್ಲೆ ನಿಲ್.

ಬುದ್ಧ

ನಿಂತೆ ಇರುವೆನು ನಾನು, ನೀನಿನ್ನು ನಿಂತಿಲ್ಲ.

(ಎಂದು ಹೇಳಿ ನಡೆಯುತ್ತಲೇ ಇರುವನು. ಅಂಗುಲೀಮಾಲ ಕೆರಳಿ ಬುದ್ಧನ ಮೇಲೆ ಏರಿ ಬರುತ್ತಾನೆ. ಅವನ ಅನುಚರರೂ ಅವನನ್ನು ಹಿಂಬಾಲಿಸುತ್ತಾರೆ.)

ಅಂಗುಲೀಮಾಲ

ಅಂಗುಲೀ ಮಾಲನಿಗೆ ಪಡಿನುಡಿದು ಬದುಕಿರುವ
ಶೂರನೊಬ್ಬನು ಇಲ್ಲ ಎಂಬರಿವು ಇಲ್ಲದಿಹ
ಓ ಕುನ್ನಿ, ಸಾವೆ ಶಿಕ್ಷೆಯೊ ನಿನಗೆ!

(ಕತ್ತಿಯನ್ನೆತ್ತಿ ಬುದ್ಧನನ್ನು ತೀರ ಸಮೀಪಿಸಿದಾಗ ಬುದ್ಧ ತಲೆಯೆತ್ತಿ ನೋಡುತ್ತಾನೆ. ಅಂಗುಲೀಮಾಲನ ಕಣ್ಣು ಬುದ್ಧನ ಕಣ್ಣುಗಳನ್ನು ದಿಟ್ಟಿಸಿ ನೋಡುತ್ತದೆ. ಒಡನೆಯೇ ಕೈಯ ಕತ್ತಿ ಕೆಳಗೆ ಬೀಳುತ್ತದೆ. ಎರಡೂ ಕೈಗಳಿಂದ ಹಿಂಬಾಲಕರನ್ನು ತಡೆಯುತ್ತಾನೆ.)

ಬುದ್ಧ

ಓ ನೀನೆ ಅಂಗುಲಿಮಾಲ? ನಿನ್ನನೇ
ಅರಸುತ್ತ ನಡೆದು ಬಂದುದು ನಾನು ಸಾವತ್ತಿ-
ಯುಪವನದ ಹಿರಿಯಸುಗೆ ನೆರಳಿಂದ!

ಅಂಗುಲೀಮಾಲ

(ಕಕ್ಕಾಬಿಕ್ಕಿಯಾಗಿ)

ಏನೆಂದೆ? . . . ಸಾವತ್ತಿ!
ಯಾರು ನೀ ಸನ್ಯಾಸಿ?
ನಿನ್ನ ಕಣ್ಣುಗಳಲ್ಲಿ ಕಡಲುಗಳು ಉರುಳುತಿವೆ,
ಕಾಣದಿಹ ಯಾವುದೋ ಲೋಕಗಳು ಅರಳುತಿವೆ!

ಬುದ್ಧ

ಎಲ್ಲವೂ ಬಯಲ ಭ್ರಾಂತಿಯು ಕಂದ.

ಅಂಗುಲೀಮಾಲ

ಕಂದ—ಕಂದ! ಹೊಸತೆನಗೆ ಈ ಮಾತಿನಂದ!

ಬುದ್ಧ

ಹೊಸತು ಹಳತೆಲ್ಲವೂ ಮತ್ತೆ ಭ್ರಾಂತಿಯು ಕಂದ!

ಅಂಗುಲೀಮಾಲ

ಯಾರು ನೀ ಸನ್ಯಾಸಿ? ಹೊಚ್ಚ ಹೊಸ ಅನುಭವವ
ನೀಡುತಿಹ ನೀನಾರು? ನನ್ನ ಖಡ್ಗದ ಕಾಳಿ
ಕೊಲೆಗಳಿಗೆಯಲ್ಲೆಂದು ಮುಷ್ಟಿ ಪೀಠವನುಳಿದು

ಧರೆಗುರುಳಿ ಹೊರಳಿದುದ ಕಾಣೆ ನಾ! ಇದೆ ಮೊದಲ್.
ಹೇಳು ಓ ಸನ್ಯಾಸಿ, ಮಂತ್ರ ವಿದ್ಯೆಯನರಿತ
ಮಾಟಗಾರನೊ ನೀನು? . . . .

ಬುದ್ಧ

ದಿಟ ಕಂದ. ಪ್ರೇಮ ಮಂತ್ರವ ಜಪಿಪ ಒಲುಮೆ ಸಾ-
ಧಕ ನಾನು!

ಅಂಗುಲೀಮಾಲ

ಕವಡು ನುಡಿ ನುಡಿಯದಿರು ಓ ಭಿಕ್ಷು. ದಿಟವನೊರೆ.
ನೀನಾರು? ಏತಕಿಲ್ಲಿಗೆ ಬಂದೆ! ಅರಿತು ನುಡಿ!
ಮೃತ್ಯುವಿನ ನೆಲೆಮನೆಯ ಹೊಕ್ಕಿರುವೆ ನೀನು!

ಬುದ್ಧ

ನಿನ್ನನೇ ಅರಸುತ್ತ ಬಂದೆನೆನ್ನನೆ ಕಂದ?
ನಿನ್ನ ಬಯಕೆಯು ನನಗೆ, ನನ್ನ ಬಯಕೆಯು ನಿನಗೆ.

ಅಂಗುಲೀಮಾಲಾ

ನಿನ್ನ ಬಯಕೆಯು ನನಗೆ! ನಿನ್ನ ಕೈಬೆರಳುಗಳ
ಬಯಕೆಯೈ!

ಬುದ್ಧ

(ಎರಡೂ ಕೈಗಳನ್ನು ಮುಂದೆ ಚಾಚಿ)

ಇದೊ ನನ್ನ ಕೈಬೆರಳ್, ಕೊಂಡು ನಲಿಯೈ ಕಂದ.
ಅದನು ನೀಡುವ ಬಯಕೆ ಇಂದೆನ್ನ ಬಗೆಯಿಂದ!
ಕೊಳ್ ಕಂದ. ಹಳೆಯ ಅಂಗುಲಿ ಮಾಲೆ ಬೇಸರಾ-
ಯಿತು ನಿನಗೆ. ಇದೊ ಹೊಸತು ಕೈಬೆರಳ್. ಕೊಳ್ ಇದನ್.

ಅಂಗುಲೀಮಾಲ

ಸಾಕು ಓ ಸನ್ಯಾಸಿ, ನುಡಿಯು ಮಂಜನು ಇನ್ನು
ನನ್ನ ಮೇಲೆಸೆಯದಿರು, ಎಸೆದು ಮೂದಲಿಸದಿರು.
ಬಂದ ಕಾರ್ಯವನುಸಿರು, ಉಸಿರಿ ನಡೆ ಉಸಿರೊಡನೆ.

ಬುದ್ಧ

ಇದುವರೆಗೆ ಗೆದ್ದಿರುವ ರಾಜ್ಯವೆಲ್ಲವ ಮೀರಿ-
ದೊಂದು ರಾಜ್ಯವ ನೀನು ಗೆಲ್ಲಬೇಕಾಗಿಹುದು.
ಅದನು ತೋರಿಸಲೆಂದೆ ನಾ ಬಂದೆ.

ಅಂಗುಲೀಮಾಲ

ರಾಜ್ಯವೇ ? ಎಲ್ಲವನು ಮೀರಿರುವ ರಾಜ್ಯವೇ ?
ನಾ ಕಾಣದಿರುವೊಂದು ರಾಜ್ಯವೇ ? ಉತ್ತರಕೆ
ದಕ್ಷಿಣಕೆ ಪೂರ್ವ ಪಶ್ಚಿಮಗಳಿಗೆ ದಿಗ್ವಿಜಯ
ಯಾತ್ರೆಯನು ಮುಗಿಸಿ ಬಂದಿಹೆ ನಾನು ! ನನ್ನ ಭಯ-
ವಾಳದಿಹ ನೆಲವುಂಟೆ ಓ ಭಿಕ್ಷು ?

ಬುದ್ಧ

ಇದೆ ಕಂದ.

ಅಂಗುಲೀಮಾಲ

ದಾರಿತೋರುವೆಯೇನು ?

ಬುದ್ಧ

ಅದಕೆಂದೆ ನಾ ಬಂದೆ.

ಅಂಗುಲೀಮಾಲ

ನಾ ಬಲ್ಲೆ ! ನಾ ಬಲ್ಲೆ ! ಅದಕೆ ನಾ ಕೇಳ್ದೆನೈ
ಮಂತ್ರ ವಿದ್ಯೆಯನರಿತ ಮಾಟಗಾರನೊ ನೀನು !
ತ್ವರೆಮಾಡು, ಸನ್ಯಾಸಿ, ಎಲ್ಲಿಹುದು ಆ ರಾಜ್ಯ ?

ಬುದ್ಧ

ತೋರಿಸುವೆನ್ನೈ ಗೆಳೆಯ, ಆದರಂಗುಲಿಮಾಲ
ನಾ ಪೇಳ್ವ ಕಜ್ಜವದು ಸಾಧ್ಯವೇ ನಿನಗೆ!

ಅಂಗುಲೀಮಾಲ

ಸಾಧ್ಯವೇ! ದಂಡುಗಳ ಕೂಡಿಸಲೆ?
ನನಗೇಕೊ ಸೈನಿಕರು—ಆದರೂ ನಿನ್ನೆದೆಯ
ಧೈರ್ಯಕ್ಕೆ ಇದೊ ಈಗಲೇ ನಡೆದು, ಅರಸುಗಳ
ಎದೆಯನ್ನು ಖಡ್ಗದಿಂದೆಚ್ಚರಿಸಿ ಪೃಥ್ವಿಯನೆ
ಕವಿಯುವನಿತೊಂದು ಜನ ಸೈನಿಕರ, ಆನೆ ಮೇಣ್
ಕುದುರೆಗಳ ಪಡೆಯನೇ ನಿರ್ಮಿಸುವೆನೊಂದೆ ದಿನ-
ದಲಿ ನಾನು. ನಡೆ ಬೇಗ, ಕಳೆಯದಿರು ಕಾಲವನು.
ಏಕಾಕ್ಷ, ಬಲಿದಾಸ, ಏಳಿರೇಳಿ!

ಬುದ್ಧ

ಅವಸರಕೆ ಎಡೆಯಿಲ್ಲ. ನಿನ್ನದೇ ಆ ರಾಜ್ಯ.
ಆನೆ ಕುದುರೆಗಳೇಕೆ? ಕಾಲಾಳು ರಥವೇಕೆ?
ನಿನ್ನನೇ ನೀಡಿದರೆ ಸಾಕು ಅದಕೆ. ನುಡಿ ಕಂದ
ನುಡಿದಂತೆ ನಡೆವೆಯಾ?

ಅಂಗುಲೀಮಾಲ

ನುಡಿವುದಾರೊಡನೆಂದು ಅರಿವಿರಲಿ ಸನ್ಯಾಸಿ,
ಅಂಗುಲೀಮಾಲನಲಿ ಕವಲು ನುಡಿಗೆಡೆಯಿಲ್ಲ.
ಒಂದೆ ಸೂರ್ಯನೊಲು ಒಂದೆ ಚಂದ್ರನೊಲು
ಒಂದೆ ಮಾತು ಅವಗೆ. ನಿನ್ನಾಸೆಯನು ನುಡಿಯೀಗ!

ಬುದ್ಧ

ವೈಭವದ ರಾಜ್ಯವನು ಗೆಲ್ಲಹೋಗುವ ಮುನ್ನ
ಗೆಲಬೇಕು ನೀನು ನಿನ್ನ!

ಅಂಗುಲೀಮಾಲ

ಗೆಲಬೇಕು ನನ್ನ ನಾನು! ಅರ್ಥವಿಲ್ಲದ ಮಾತು!
ವಜ್ರನಖವನ್ನೆತ್ತಿ ಅಪ್ಪಳಿಸಿ ವನರಾಜ ಮೃಗರಾಜ
ಗೆಲಬೇಕು ಕರಿಯನ್ನು. ಗೆಲಬೇಕು ತನ್ನನ್ನು
ಎಂಬುದದು ಅರ್ಥವಿಲ್ಲದ ಮಾತು ಸನ್ಯಾಸಿ.
ಅಂಗುಲೀಮಾಲನೀ ಸಮಯಕ್ಕೆ ಮೌಲ್ಯವಿದೆ.
ಸಮಯವೇ ಸರಸಕ್ಕೆ ?

ಬುದ್ಧ

ದಿಟ ಕಂದ, ಹರಿಯು ಗೆಲಬೇಕು ಕರಿಯನ್ನು !
ಸಾರ್ವಭೌಮತ್ವ ಸಂಸ್ಥಾಪನೆಯ ಹಸಿಯೆದೆಯ
ಕೀಳಾಸೆಗಾಳಾಗಿ ಗೆಲಬೇಕು ಕರಿಯನ್ನು !
ಮೃಗರಾಜನೆಂದೆಂಬ ಬೇಗಡೆಯ ಮಕುಟವನು
ತಲೆಗೇರಿಸುವ ಆಸೆಭೂತಕ್ಕೆ ಊಳಿಗದ
ಭಟನಾಗಿ ಹರಿಯು ಗೆಲಬೇಕು ಕರಿಯನ್ನು.
ಅದರಿಂದಲೇ ಕಂದ 'ಮೃಗರಾಜ'ನಾದರೂ
ಮೃಗತನವ ಮೀರದಿದೆ!

ಅಂಗುಲೀಮಾಲ

ಸಾಕು ಹೋಲಿಕೆ ಭಿಕ್ಷು. ನಾನಾರಿಗಾಳು ಪೇಳ್ ?
ಎನ್ನೊಡನೆ ಬಾ ಕಾಂಬೆ, ಅರಸುಗಳು ಊಳಿಗದ
ಭಟರಂತೆ ಒಂದು ಕೈಯಲಿ ಜೀವ, ಒಂದು ಕೈ-
ಯಲಿ ತಂಬುಲದ ಪಾತ್ರೆಯನು ಹಿಡಿದು ಒಡನಡೆವ
ವೈಭವದ ದೃಶ್ಯವನು. ಒಯಸಿದೆನೊ, ನಡೆಮಡಿಯ
ಹಾಸುವರು. ಈಗ ಪೇಳ್ ಸನ್ಯಾಸಿ, ರಾಜರಿಂ
ಸೇವೆಯನು ಕೈಕೊಳುವ ನಾನಾರಿಗಾಳ್ ?

ಬುದ್ಧ

ರಾಜಸೇವೆಯ ಕೊಂಡು ಹಿರಿಯನಾಗುವೆಯೆಂದು
ಚೋದಿಸುವ ಮನದಾಶಾಪಿಶಾಚಕ್ಕೆ.
ಅದು ಕುಣಿಸಿದೊಲು ಕುಣಿವ ಮರುಳೊ ನೀನ್ !

ಏಕಾಕ್ಷ

(ಬುದ್ಧನನ್ನು ಹೊಡೆಯಹೋಗುತ್ತಾ)

ಏಯ್ ತಿರುಕ, ನಮ್ಮೊಡೆಯನನು ಮರುಳೆನುವ
ನಿನ್ನ ಬೆನ್ನೆಲುಬಿಗೇನೊ ಬಂದಿದೆ ಹೊತ್ತು !

ಅಂಗುಲೀಮಾಲ

(ಅವನನ್ನು ತಡೆದು)

ಏಕಾಕ್ಷ ನಿಲ್, ಬಲಿದಾಸ . . .

(ಕಣ್ಣುಸನ್ನೆ ಮಾಡುತ್ತಾನೆ.)

ನಾ ಕರೆವವರೆವಿಗೂ ಗುಹೆಯಲಿರಿ.

(ಇಬ್ಬರೂ ತಲೆತಗ್ಗಿಸಿ ನಡೆಯುತ್ತಾರೆ. ಅವರು ಮರೆಯಾದನಂತರ ಬುದ್ಧನ ಕಡೆ ತಿರುಗಿ)

ನನ್ನೆದೆಯ ಕಲಕಿದೆಯೊ ಸನ್ಯಾಸಿ ; ಕವಿಯುತಿದೆ
ಮಂಕೊಂದು ಮತಿಯನ್ನು. ಹಿರಿರಾಜ್ಯವಿಹುದೆಂದೆ.
ದಾರಿತೋರುವೆನೆಂದೆ, ನನ್ನನಾ ಗೆಲ್ಲಲೇಬೇಕೆಂದೆ.
ಮನದಾಸೆಗಾಳೆಂದೆ. ಅದು ಕುಣಿಸಿದೊಲು ಕುಣಿವ
ಮರುಳು ನಾನೆನುತಿರುವೆ. ನನ್ನ ಧೈರ್ಯದ ಭೂಮಿ
ಕಾಲಡಿಯೆ ಕುಸಿಯುತಿದೆ. ನೀನೆನ್ನ ನೋಡದಿರು,
ನೋಡದಿರು ಸನ್ಯಾಸಿ, ನೋಡಿ ಎದೆ ಕಲಕದಿರು.
ನನ್ನ ಕಂಡಂಜದವ ನೀನೊಬ್ಬನೇ ಭಿಕ್ಷು.
ಕೊಲ್ಲದುಳಿಸುವ ಬಗೆಯನಾಂತೆ ನಾ
ಕಂಡು ನಿನ್ನೊಬ್ಬನನೆ !

(ಹಾಗೆ ಹೇಳುತ್ತಾ ತಲೆ ತಗ್ಗಿಸುತ್ತಾನೆ. ಬುದ್ಧ ನಿಧಾನವಾಗಿ ಮುಂದುವರಿದು ಆತನನ್ನು ಅಪ್ಪಿಕೊಳ್ಳುತ್ತಾನೆ.)

ಅಂಗುಲೀಮಾಲ

ಆವುದೀ ಶೀತಲ ಸುಖ ಸ್ಪರ್ಶ !
ಉಕ್ಕುತಿದೆ ಎದೆ ಹರ್ಷ !
ನಾ ಬಳಲಿ ಬಂದಂದು ಎದೆಗಪ್ಪಿ ನಲಿವಂದು
ನನ್ನ ತಾಯ್, ನನ್ನೆದೆಯು ಹೀರಿದಾ ಮುದವನ್ನು
ಮೀರಿದಾ ಈ ಸೊದೆಯ ಹರ್ಷವನು ಸೂಸುವೀ
ಮಾತೆಯಾರ್ ? ಒಲುಮೆ ಬತ್ತಿದ ಎದೆಯ ಮರಳಿನಲಿ
ಪ್ರೇಮವನು ಸಿಂಚಿಸುವ ಈ ಪುಣ್ಯತೀರ್ಥನಾರ್ ?

ಬುದ್ಧ

ತಲೆಯೆತ್ತು ಓ ಕಂದ.

ಅಂಗುಲೀಮಾಲ

ತಲೆಯೆತ್ತಲಾರೆನಾ. ಎತ್ತಲಾರೆನು ತಲೆಯ.
ನಿನ್ನ ಕರುಣಾಗಂಗೆ ಕಣ್ಣಿನಿಂ ಧುಮುಕುತಿರೆ
ಮುಡಿಯೊಡ್ಡಿ ತಡೆವ ಬಲವಿನಿತಿಲ್ಲವೈ ತಂದೆ.
ಪುಡಿಗಯ್ಯುದಿರು ಅಯ್ಯೊ ನನ್ನನಿತು ಶಕ್ತಿಯನು !

(ಬುದ್ಧನ ಕಾಲಬಳಿ ಕುಸಿಯುತ್ತಾನೆ. ಬುದ್ಧದೇವ ಅಂಗುಲೀಮಾಲನನ್ನು ಬಿಟ್ಟು ಸ್ವಲ್ಪ ದೂರದಲ್ಲಿ ನಿಲ್ಲುತ್ತಾನೆ)

ಬುದ್ಧ

ಸಾಕು ಈ ದೌರ್ಬಲ್ಯ ! ಏಳು ಅಂಗುಲಿಮಾಲ,
ನೀನೆಂದು ಕಾಣದಿಹ ರಾಜ್ಯವನು ಸಾಧಿಸಲು
ಎದ್ದೇಳು !

ಅಂಗುಲೀಮಾಲ

(ನಿಧಾನವಾಗಿ ಎದ್ದು ಬುದ್ಧನ ಮುಂದೆ ಕೈಜೋಡಿಸಿ)

ಮರೆಮಾಚದಿರು ಇನ್ನು. ನೀನಾರು ಪೇಳಯ್ಯ.
ನಾಡಾಡಿ ಸನ್ಯಾಸಿ ನೀನಲ್ತು. ಕ್ಷಣದಲ್ಲಿ ನನ್ನೆದೆಯ
ಒಳಪೊಕ್ಕು ಅರಸಾಗಿ ಆಳುತಿಹ ನೀನಾರು?

ಬುದ್ಧ

ದಿಟಕು ನಾಡಾಡಿ ನಾ! ಇಂದು ಈ ಊರಿನಲಿ
ನಾಳೆ ಬೇರೊಂದರಲಿ ಭಿಕ್ಷೆಬೇಡುತ ಅಲೆವ
ಬುದ್ಧನೆಂಬರು ನನ್ನ.

ಅಂಗುಲೀಮಾಲ

ಬುದ್ಧದೇವನೆ ನೀನು!

(ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು)

ಕೊಂದೆಯೋ ನೀನೆನ್ನ ಶಾಕ್ಯಮುನಿ, ನೀ ಕೊಂದೆ.
ರಾಜರಾಜರು ನನ್ನ ಕಾಣಲೆಂತಂಜಿದರೊ,
ಅಂತೆ ಅಂಜಿದೆ ನಾನು ನಿನ್ನ ನೋಟವನು.
ಪರ್ವತಾರಣ್ಯಗಳ ಹೃದಯದಲ್ಲಿ ದಟ್ಟೈಸಿ
ರಾಜ್ಯವಾಳುವ ತಮವು ಸೂರ್ಯಕಿರಣವನೆಂತೊ,
ನಿವಾರಿಸಿದೆನಂತೆನಾನಿದುವರೆಗೆ ನಿನ್ನನ್ನು.
ಏಕಿಲ್ಲಿಗೈತಂದೆ? ಓ ತಂದೆ, ಪೇಳೇಕೆನ್ನ ಕೊಂದೆ?
ಇದುವರೆಗು ನಿದ್ರಿಸಿದ ನನ್ನ ಹೃದಯಕೆ ನಿನ್ನ
ಕರುಣೆಕಡೆಗೋಲಿಟ್ಟು ಮಥಿಸುತಿಹೆ ಏಕೆ?
ನಡೆ ತಂದೆ, ಕೃಪೆಯಿಟ್ಟು ನಡೆ ಈಗ ಇಲ್ಲಿಂದೆ.

ಬುದ್ಧ

ನೀನೆ ಪಡೆವೆಯೊ ಕಂದ. ಇದುವರೆಗೆ ಹೊಂದಿದ್ದ
ಶಾಂತಿ ಭ್ರಾಂತಿಯನಲ್ಲ, ದಿಟದ ಶಾಂತಿಯ ಪಡೆವೆ.
ಅದುವೆ ನಾನೊರೆದ ವೈಭವದ ಸಾಮ್ರಾಜ್ಯ ಸಿರಿ.

### ಅಂಗುಲೀಮಾಲ

ಪಡೆವೆನೇ ತಂದೆ? ಪಡೆಯಬಹುದೇ ಅದನು?
ನನ್ನೆದೆಯ ತಮದ ಹಿಮ ಪರ್ಬತಂಡೆಯಾಗಿರಲು
ಅದನೊಡೆವ ಬಲವಿರುವ ಅಗ್ನಿಬಾಣವು ಇಹುದೆ?
ಏತಕೀ ಬರಿ ಬಯಲ ವಿಭ್ರಾಂತಿ? ನಡೆ ತಂದೆ
ನನ್ನ ಬಿಡು. ಹಿಂಸಾನಾಗರನ ಪರ್ಯಂಕದಲಿ
ನಿದ್ರಿಸಿಹ ನನ್ನ ಮನವನು ನೀನು ಕದಡದಿರು.

### ಬುದ್ಧ

(ಅಂಗುಲೀಮಾಲನನ್ನು ಸಮೀಪಿಸಿ ಅವನ ಎದೆಯನ್ನು ಮೃದುವಾಗಿ ನೇವರಿಸುತ್ತಾ)

ಶಾಂತನಾಗೆಲೆ ಕಂದ. ಬೀಸುಗಾಳಿಗೆ ಇನಿತೆ
ಸರಿಯುತಿಹ ಮರದೆಲೆಯ ಜವನಿಕೆಯ
ಹಿಂದದೋ ಸಿಂಚಿಸುತೆ ಜೊನ್ನವನು ಮೂಡಿಬರು-
ತಿದೆ ನೋಡು ಶಾಂತಿಮಯದಾನಂದ ಶಶಿಬಿಂಬ.
ತುಸು ಮುಂಚೆ, ಸಂಜೆಗತ್ತಲೆ ಕವಿವ ಹೊತ್ತಿನಲಿ
ತಮವು ಜಗವೆಲ್ಲವನು ತುತ್ತುಗೊಂಡುದೊ ಎಂಬ
ಭ್ರಾಂತಿ ಮೂಡಿದುದಲ್ತೆ? ಇದೊ ಈಗ ಈ ಜಗದ
ನೀರವ ಧ್ಯಾನದಲಿ ವಿಶ್ವಮನದಂಚಲದಿ
ಉದಯಿಸುತ್ತಿದೆ ಕಂದ, ಘನವಿಪಿನ ನೈರಾಶ್ಯ-
ದಂಧತೆಯ ಸೀಳುತಲಿ ಶಾಂತಿ ಶಶಿ. ಅಂತೆಯೇ
ನಿರ್ವಾಣ ಶಾಂತಿ ಚಂದ್ರೋದಯವು. ಮೂಡಲದು
ಎದೆತುಂಬ ಬೆಳಕು; ಬೆಳಕೋ ಬೆಳಕು. ಮಿಂಚಿನುಳಿ
ಘಟ್ಟಿಸಲು ಹೃದಯ ಗ್ರಂಥಿಗಳೆಲ್ಲ ಗಳಿಗೆಯಲಿ
ಪುಡಿಯಾಗಿ ಸ್ವಚ್ಛಂದ ಛಂದದಲಿ ನರ್ತಿಪುದು
ನಿನ್ನಿರವು. ಸ್ವಾತಂತ್ರ್ಯವೇ ಅದರ ಬೆಳಕಿನೊಡಲು.
ಪಡೆ ಕಂದ. ಪಡೆದು ಸಲಿ ಶಾಂತಿಯನು!

ಅಂಗುಲೀಮಾಲ

ಪಥವಾವುದೈ ತಂದೆ. ಎಂತು ಪಡೆಯುವೆನದನು ?

ಬುದ್ಧ

ಏಳು, ನಡೆ.

(ಅಂಗುಲೀಮಾಲನ ಕೈಹಿಡಿದು)

ಇದೊ ನಿನ್ನ ಕೈಹಿಡಿದು

ಮುಂದೆ ನಡೆಯುವೆ ನಾನು. ಹಿಂದೆ ನೀನೈತರುವೆ.
ನಡೆ ಕಂದ, ದಾರಿ ಕಾಂಬುದು ನಿನಗೆ. ನಿನ್ನದೇ
ಮನೆಯಹುದು, ಆ ಶಾಂತಿಯರಮನೆಯು.
ಸಂತಸದಿ ಮನೆಯೊಡೆಯ ತನ್ನಮನೆ ಹೊಗುವಂತೆ
ನೀ ನಡೆವೆ ಎದೆಯ ಶಾಂತಿಯ ಗೃಹಕೆ.

ಅಂಗುಲೀಮಾಲ

ಈಗಲೇ . . . ? ಇಂತೆಯೇ . . . ?

ಬುದ್ಧ

ಈಗಲೇ, ಇಂತೆಯೇ. ಒಂದೆ ಪರಿವರ್ತನೆಯು.
ಕಿತ್ತೆಸೆಯೊ ಅಂಗುಲೀ ಮಾಲೆಯನು,
ಆ ಕರ್ಮ ಪಾಶವನು. ಮೇಣಂತೆ ಮಕುಟವನು, ಮೃತ್ಯುವಿನ
ತೊತ್ತುತನದಪಮಾನ ಚಿಹ್ನೆಯನು !

(ಬುದ್ಧನ ಕಡೆಯೇ ದಿಟ್ಟಿಸುತ್ತಾ ಅಂಗುಲೀಮಾಲ ತನಗರಿವಿಲ್ಲದೆಯೇ ಮಾಲೆ ಮಕುಟಗಳನ್ನು ಕಳಚುತ್ತಾನೆ. ಅವನ ಮುಖ, ಹಾಗೆ ಮಾಡುವಾಗ ಅತೀವವಾದ ಯಾತನೆಯನ್ನು ಆ ಬಳಿಕ ಸಮಾಧಾನದ ಭಾವವನ್ನು ತಳೆಯುತ್ತದೆ).

ಅಂಗುಲೀಮಾಲ

ಹಗುರಾಯಿತು ಎದೆ
ತುಂಬುತ್ತಿದೆ ಸೊದೆ
ನನ್ನೀ ಜೀವನ ಕಣ ಕಣವನ್ನು

ಹರಿಯುತ್ತಿದೆ ಮುದ
ಮೈದೋರಿದೆ ಹದ
ಪಾವನಗೈದಿದೆ ಚಣ ಚಣವನ್ನು

ಬೆಳುದಿಂಗಳ ಹೊಳೆ
ಕಾನನದೆಳೆಯೆಳೆ
ಮೀಯಿಸಿ ತೊಳೆತೊಳೆದಾರೀತಿ
ಬಾಳನು ತುಂಬಿತೊ
ಪಾವನ ಗೈದಿತೊ
ನಿನ್ನೀ ದೇವಮನೋಹರ ಪ್ರೀತಿ !

ಬುದ್ಧ

ಇನ್ನು ನಡೆ. ಸಾವತ್ತಿಯನು ಸಾರಿ
ಪೇಳುವೆನು ಉಳಿದುದನು.

ಅಂಗುಲೀಮಾಲ

ಇರು ತಂದೆ. ಗುಹೆಗೈದಿ, ಪೇಳ್ವುದೆಲ್ಲವ ಪೇಳ್ದು
ಅವರ ಬದುಕಿಗೆ ದಾರಿಯನು ಗೈದು ಐತರುವೆ.

ಬುದ್ಧ

ಅವರರಿವರೆಲ್ಲವನು ಪಿಂಬಳಿಕೆ, ನಡೆಕಂದ,
ಹಿಂತಿರುಗಿ ನೋಡದೆಯೆ ಮುಂದುವರಿ. ನಿಂತ ನಿಲು-
ವಿನಲಿ ತೊರೆದೈದುವುದೆ ಸನ್ಯಾಸ !

(ಬುದ್ಧ ಮುಂದೆ ಸರಿಯುತ್ತಾನೆ. ಅಂಗುಲೀಮಾಲ ಮಂತ್ರಮುಗ್ಧನಂತೆ ಹಿಂಬಾಲಿಸುತ್ತಾನೆ).

[ತೆರೆ]

## ದೃಶ್ಯ ೪

(ಸಾವತ್ತಿಯ ಉಪವನ. ಬುದ್ಧನ ಶಿಷ್ಯಸಮೂಹ ಚಿಂತಾಮಗ್ನವಾಗಿ ಕುಳಿತಿದೆ ಆನಂದ ಮತ್ತೆ ಒಬ್ಬಿಬ್ಬರು ಸಮಾಧಾನದ ಮುಖಮುದ್ರೆಯನ್ನು ತಾಳಿದ್ದಾರೆ.)

ಒಬ್ಬ ಶಿಷ್ಯ

ಹಗಲುರುಳಿ ಇರುಳಾಯ್ತು
ಇರುಳು ನಟ್ಟಿರುಳಾಯ್ತು

ಮತ್ತೊಬ್ಬ ಶಿಷ್ಯ

ನಟ್ಟಿರುಳು ಉಷೆಯಾಯ್ತು
ಉಷೆಯಳಿದು ಬೆಳಗಾಯ್ತು

ಎಲ್ಲರೂ

ಮೂಡನಿನ್ನೂ ಶಾಕ್ಯ ದಿನಮಣಿ !

ಮತ್ತೊಬ್ಬ ಶಿಷ್ಯ

ಹಗಲು ಕಳವಳವಾಯ್ತು
ಇರುಳು ಬೇಗುದಿಯಾಯ್ತು

ಒಬ್ಬ ಶಿಷ್ಯ

ನಟ್ಟಿರುಳು ತಪವಾಯ್ತು
ಉಷೆಯು ಆತಪವಾಯ್ತು

ಎಲ್ಲರೂ

ಬಾರನಿನ್ನೂ ನಮ್ಮ ಹೃನ್ಮಣಿ.

ಮತ್ತೊಬ್ಬ ಶಿಷ್ಯ

ಬಾಳಿನ ಬನದಲಿ
ಶೂನ್ಯದ ಗಾಳಿಯು
ಚೀರುತ ಕುಣಿಯುತಿದೆ.

ಮತ್ತೊಬ್ಬ ಶಿಷ್ಯ

ಭೀತಿಯ ಬೆಂಕಿಯು
ನಾಲಗೆ ಚಾಚುತೆ
ನುಂಗುತ ಸೊಣೆಯುತಿದೆ.

ಇನ್ನೊಬ್ಬ ಶಿಷ್ಯ

ಬರುವನೋ ಅವನು
ಬಾರನೋ ಅವನು
ಬದುಕಬೇಕು ಏಕೆ?

ಎಲ್ಲರೂ

ನಮ್ಮೀ ನಾಳೆಗೆ
ಅವನಾ ಬಾಳಿನ
ಬರಿ ನೆನಪೇ ಸಾಕೆ?

ಮತ್ತೊಬ್ಬ ಶಿಷ್ಯ

ಉರಿಸು ಉರಿಸು ಉರಿ
ಆ ನಿರ್ವಾಣದ ಪರಿ
ಬಾಳಿದು ಬೇಳಾಗಲಿ ಅದಕೆ.

ಇನ್ನೊಬ್ಬ ಶಿಷ್ಯ

ಅವನಿಲ್ಲದ ಬಾಳ್
ಎಂತಿರುವುದೊ ಪೇಳ್
ಆಳಾಗಲಿ ಸಾವಿನ ಮುದಕೆ.

ಆನಂದ

ಏತಕೀ ಮೋಘದೀ ದುಮ್ಮಾನ?
ಶ್ರೀ ಗುರುವಿನ ಎದೆಯರಿವಿನ ದಾಸಕೆ
ಇದುವೇ ನಾವೆಸಗುವ ಸಮ್ಮಾನ?

ಎಲ್ಲರೂ

ಬರುವನೋ ಅವನು
ಬಾರನೋ ಅವನು
ಬದುಕಬೇಕು ಏಕೆ?

ಹಿನ್ನೆಲೆಗೆ ಇಬ್ಬರು

ಮೂಡನಿನ್ನೂ ಶಾಕ್ಯದಿನಮಣಿ
ಬಾರನಿನ್ನೂ ನಮ್ಮ ಹೃನ್ಮಣಿ!

ಆನಂದ

ರವಿಯು ಮುಳುಗಿ ಹೊಸತಾಗಿ ಇಂದು ತಾ
ಮೂಡಿ ಬಂದ ತೆರದಿ . . .
ಜಗವು ತಾನಿಂದು ಹೊಸತು ಬೆಳಕಿನಲಿ
ಮಿಂದು ಬಂದ ತೆರದಿ
ಬಂದೆ ಬರುವನವನು—ತಾ
ನೈತಂದೆ ತರುವನವನು!

ಒಬ್ಬ ಶಿಷ್ಯ

ಬರುವನೆಂದೆಯಾ?

ಮತ್ತೊಬ್ಬ ಶಿಷ್ಯ

ಬಂದನೆಂದೆಯಾ?

ಮತ್ತೊಬ್ಬ ಶಿಷ್ಯ

ತಂದನೆಂದೆಯಾ ?

ಆನಂದ

ನನ್ನೆದೆ ವಾಣಿಯು ನುಡಿಯಿಸುತಿರೆ
ನಾ ಬಹನೆಂದೆ
ತಹನೆಂದೇ . . .

[ಅಷ್ಟರಲ್ಲಿ ಒಬ್ಬ ಶಿಷ್ಯ ದೂರಕ್ಕೆ ಬೆರಳು ತೋರಿಸುತ್ತಾ]

ಶಿಷ್ಯ

ಯಾರದೈತರುತಿಹರು
ಅಲ್ಲಿ ಆ ದೂರದಲಿ ?

ಒಬ್ಬ ಶಿಷ್ಯ

ಬುದ್ಧದೇವನೆ ಏನು ?

ಮತ್ತೊಬ್ಬ ಶಿಷ್ಯ

ಸಿದ್ಧದೇವನೆ ಏನು ?

ಎಲ್ಲರೂ

ಬಂದನೇ ಶಾಕ್ಯಮುನಿ ? ನಮ್ಮೆದೆಗೆ ಸೊದೆಯನ್ನು
ತಂದನೇ ಶಾಕ್ಯಮುನಿ ?

ಮತ್ತೊಬ್ಬ ಶಿಷ್ಯ

ಅವನದೇ ಗಾಂಭೀರ್ಯ, ಅವನದೇ ರಾಜನಡೆ !
ಇರು, ನಿಲ್ಲು. ಅವನ ಹಿಂಗಡೆಗಾರೊ ಅವನನೇ
ಅನುಸರಿಸಿ ಐತರುವವೋಲಿಹುದು.

ಮತ್ತೊಬ್ಬ ಶಿಷ್ಯ

ಕತ್ತಲೆಯ ಮೊತ್ತವನು ದಾಸನನ್ನಾಗಿಸುತೆ
ರವಿದೇವ ನಡೆಯುವೊಲು ಕಾಣುತಿದೆ!

(ಅಷ್ಟರಲ್ಲಿ ಬುದ್ಧದೇವ, ಅವನ ಹಿಂದೆ ತಲೆತಗ್ಗಿಸಿದ ಅಂಗುಲೀಮಾಲ ನಡೆದುಬರುತ್ತಾರೆ)

ಒಬ್ಬ ಶಿಷ್ಯ

ಕಾಂಬ ಹಂಬಲದ ತುಂಬು ಹೊನಲಿದೋ
ನಿನ್ನ ಕಾಣ್ಕೆ ವಾರಿಧಿಯನು,
ಸೇರಿ ಬದುಕಾಯ್ತು ಪೂರ್ಣ ಪಾವನವು
ತನ್ನ ಜೀವನದ ನಿಧಿಯನು!

ಎಲ್ಲರೂ

ಸುಸ್ವಾಗತ ಸುಸ್ವಾಗತ
ಸ್ವಾಗತ ಶ್ರೀ ಬುದ್ಧನಿಗೆ!
ಉದ್ಧಾರದ ಮಹಮಂತ್ರದ
ಕರುಣಾಸೂತ್ರ ನಿಬದ್ಧನಿಗೆ!
ಅವನತ ಮುಖಿ ಬೋಧಿಯ ಸಖಿ
ನೀಡಿದ ನಿರ್ವಾಣ ಫಲಕ್ಕೆ!
ಯುಗಯುಗಗಳು ಬುವಿಬಾಳನು
ಸಂಸೇಚಿಪ ಪುಣ್ಯ ಜಲಕ್ಕೆ!
ಸುಸ್ವಾಗತ ಸುಸ್ವಾಗತ
ಸ್ವಾಗತ ಶ್ರೀ ಬುದ್ಧನಿಗೆ
ಎದೆ ಬೆಳಗುವ ಮನ ತೊಳಗುವ
ದರ್ಶನ ಸಂಶುದ್ಧನಿಗೆ!

(ಬುದ್ಧದೇವ ರಂಗಮಧ್ಯಕ್ಕೆ ಬರುತ್ತಾನೆ. ಎಲ್ಲರೂ ನಮಸ್ಕರಿಸುತ್ತಾರೆ)

ಬುದ್ಧ

ಬಾ ಕಂದ ಬಾ ತಮ್ಮ ಬಾ ಗೆಳೆಯ, ಹತ್ತಿರಕೆ.
ಆನಂದ ಇಗೊ ನಿಮ್ಮ ಸಂಘಕ್ಕೆ ಮತ್ತೊಂದು
ಕಾಣಿಕೆಯ ನೀಡುತಿಹೆ. ಸ್ವೀಕರಿಸಿ. ಬಹು ದೂರ
ಬಹಳ ದಿನ ನಡೆದಿದ್ದ ಕಿರಿತಮ್ಮ ಇದೊ ಇಂದು
ಮತ್ತೆ ಮನೆಗೈದಿಹನು. ಅಪ್ಪಿಕೊಳಿ.
ನಡೆ ಕಂದ, ನಿನಗಿನ್ನು ಇವರೆಲ್ಲ ಅಣ್ಣದಿರು.

ಆನಂದ

(ಸಮೀಪಿಸಿ ಅವನನ್ನು ಆಲಂಗಿಸಿಕೊಂಡು)

ನಿನ್ನ ಪರಿಚಯವನೊರೆ, ಸಲುದಮ್ಮ.

ಅಂಗುಲೀಮಾಲ

ಅಂದು ಅಂಗುಲೀಮಾಲ, ಇಂದು ಬುದ್ಧ ಕರುಣಾಮಾಲ.

ಎಲ್ಲರೂ

(ಬೆಚ್ಚಿಬೀಳುತ್ತಾ)

ಇವನೆ ಅಂಗುಲಿಮಾಲ? ಇವನೆ ಅಂಗುಲಿಮಾಲ?

ಬುದ್ಧ

ಹಿಂದಷ್ಟೆ. ಇಂದಲ್ಲ. ಮುಂದಿನ್ನು ಪುಣ್ಯಾಕ್ಷ.

ಒಬ್ಬ ಶಿಷ್ಯ

ಬೆಚ್ಚುತಿದೆ ನಮ್ಮೆದೆಯು, ಓ ಗುರುವೆ ಮನ್ನಿಸೈ.
ನರರುಧಿರದೋಕುಳಿಯ ಕೇಳೀ ನಿಮಗ್ನನಿಗೆ
ರುಚಿಸುವುದೆ ಸಂನ್ಯಾಸ? ಹರಿಣದೆದೆ ರಕುತ ಪಾ-
ನಾಸಕ್ತ ವ್ಯಾಘ್ರಕ್ಕೆ ಸವಿಯಹುದೆ ಹಾಲು ಹಣ್?

ಬುದ್ಧ

ಆಶೆ ಭೂತದ ವಿಕಟ ನೃತ್ಯಕ್ಕೆ ಎಡೆಗೊಡಲು
ಹರಿಣ, ನರ, ವ್ಯಾಘ್ರಕ್ಕೆ ಭೇದವಿನಿತೊಂದಿಲ್ಲ.
ಆಶಾವಿಮುಕ್ತನಿಗೆ ಧರ್ಮಪಥ ಬದ್ಧನಿಗೆ
ಮರುವುಟ್ಟು ದೊರೆತಂತೆ. ನಿರ್ವಾಣ ರಸಧಿಯಲಿ
ಮಿಂದು ಬಂದಾ ಬಳಿಕ, ಜೊನ್ನದಲಿ ಮಿಂದ ತರು-
ಗಳ ತೆರದಿ ಎಲ್ಲರೂ ಸೊಬಗನ್ನೆ ಸೂಸುವರು!
ಆನಂದ, ಕಾವಿಯುಡುಗೊರೆಯನ್ನು ನೀಡವಗೆ!

(ಆನಂದ ನಿಷ್ಕ್ರಮಿಸುತ್ತಾನೆ)

ಬಾ ಕಂದ. ಬಾ ಬಳಿಗೆ ಪುಣ್ಯಾಕ್ಷ.

ಅಂಗುಲೀಮಾಲ

ತಂದೆ . . . ತಂದೆ . . .

ಬುದ್ಧ

ಕೇಳು ಕಂದ, ಕೇಳು
ನಿನ್ನ ಮನವನು ಕೊರೆವ ಸಂಶಯದ ಕೀಟವನು
ಈಗಲೇ ಹೊರಹಾಕು.

ಅಂಗುಲೀಮಾಲ

(ಬುದ್ಧನ ಪಾದಗಳನ್ನು ಮುಟ್ಟಿ)

ಒಲುಮೆಯ ಬಾನೇ ಕರುಣೆಯ ಕಡಲೇ
ಕಲ್ಪತರುವು ನೀನು,
ನಿನ್ನೀ ಕರುಣೆಗೆ ನಿನ್ನೀ ಒಲುಮೆಗೆ
ಎಂತರ್ಹನೊ ನಾನು?
ಜೀವದ ಹಂಗನು ತೊರೆದ್ಯೆ ತಂದೆಯೆ
ಎದೆಗೆ ಸೊದೆಯ ಹರಿಸಿ,

ಪಾಪಿಯನೊಪ್ಪಿದೆ ಹೃದಯಕೆ ಅಪ್ಪಿದೆ
ಪೀಯೂಷವನೇ ಸುರಿಸಿ
ಇಂತಹ ಮಂಗಳ ಸನ್ನಿಧಿಯಲಿ ನಾ-
ನೆಂತಿರುವೆನೊ ತಂದೆ ?
ನಿನ್ನೀ ಕರುಣೆಗೆ, ನಿನ್ನೀ ಒಲುಮೆಗೆ
ಎಂತರ್ಹನೊ ನಾನು !

ಬುದ್ಧ

ಏಳ್ ಕಂದ. ನುಡಿಯದಿರು ನೀನಿಂತು, ಮೇಲಕೇಳ್.
ಮಂಗಳಾಮಂಗಳಗಳೆರಡು ಕೇಳ್ ಒಂದೆ ಸಮ
ನಿರ್ವಾಣದಗ್ನಿಯಲಿ !

(ಅಷ್ಟರಲ್ಲಿ ಆನಂದ ಕಾವಿಯ ಅರಿವೆಯನ್ನು ತರುತ್ತಾನೆ. ಬುದ್ಧ ಅದನ್ನು ಪಡೆದು ಅಂಗುಲೀಮಾಲನಿಗೆ ಕೊಡುತ್ತಾ)

ಇದೊ ಕಂದ ಇದನು ಕೊಳ್,
ಅಗ್ನಿಯುಡೆ. ಒಳಗು ಹೊರಗೆಲ್ಲವನು ದಹಿಸುತ್ತೆ
ಪರಿಶುದ್ಧಿಗೈಯುವುದು. ಅಂತರಂಗದ ಸಮತೆ
ನೆರವ ನೀಡಲು ಇದಕೆ ಮೋಹಕಿದು ಮಹದಸ್ತ್ರ.
ಕೊಳ್ ಕಂದ ಧರಿಸಿದನು.

(ಅಂಗುಲೀಮಾಲ ವಿನಮ್ರನಾಗಿ ಅದನ್ನು ಸ್ವೀಕರಿಸುತ್ತಾನೆ. ಅದನ್ನು ಕಣ್ಣುಗಳಿಗೆ ಒತ್ತಿಕೊಂಡು ಮತ್ತೆ ಬುದ್ಧನ ಪಾದಗಳಿಗೆ ನಮಸ್ಕರಿಸುತ್ತಾನೆ)

ಅಂಗುಲೀಮಾಲ

ಪೇಳ್ ತಂದೆ, ಹಿಮಗಿರಿಯ ಮೀರಿರುವ ಪಾಪ ಭಾ-
ರವನದನು ಕಳೆಯುವೊಡೆ ಪಥವಿಹುದೆ ? ಉದ್ಧರಿಸು
ಎನ್ನನುದ್ಧರಿಸು ಓ ಗುರುದೇವ, ಪಾಪ ಕೂಪದಸಹ್ಯ
ದುರ್ವಾರದಾಳದಿಂ ಮೇಲೆತ್ತು. ಪೇಳ್ ತಂದೆ
ಇಹುದೆ ಪಥ ?

ಬುದ್ಧ

ಇದೆ ಕಂದ. ಸಹನೆ ಸಾಧನೆ ಬೇಕು ಅದನರಿಯೆ.
ಕರ್ಮದಪರಂಪಾರವಾರಿಧಿಯ ವೀಚಿಗಳು
ತೆರೆಯೆದ್ದು ತೆರೆಯಿಳಿಯೆ, ತಚ್ಛಂದಕನುವಾಗಿ
ಲಾಸ್ಯ ತಾಂಡವವಾಡಿ ಬಳಲುವುವು ಜೀವಿಗಳು.
ತೋರ್ಕೆಗಪರಂಪಾರವಾದುದೀವಾರಿಧಿಯ
ಪಾರವನು ಪಡೆಯುವಾ ಹವಣರಿಯೆ ಅದುವೆ ತಾನ್
ನಿರ್ವಾಣದಂಬುಧಿಯ ರೂಪವನು ಪಡೆಯುವುದು.
ಅಂದೆ ಬಿಡುಗಡೆ ನರಗೆ. ಆಸೆ ದುಃಖದ ಮೂಲ.
ಧ್ಯಾನ ಖಡ್ಗದಿನದರ ಮೂಲವನು ತರಿದೊಗೆಯೆ
ನಲುಮೆ ಕಾರಂಜಿಯಾಗುವುದು ಎದೆ. ಉಳಿದುದನು
ನೀನರಿವೆ ಈ ಪಥದಿ ಬಹುದೂರ ನಡೆದಂದು.

ಆನಂದ

ಕರ್ಮವನು ಕುರಿತೊಂದು ಸಂದೆಗವು ಮೂಡುತಿದೆ.
ಕೃಪೆಯಿಟ್ಟು ಕಳೆಯದನು ತಂದೆ.

ಬುದ್ಧ

ಕೇಳ್ ಕಂದ. ಅರಿತಿಹೆನೆ ಪೇಳುವೆನು.

ಆನಂದ

ಹೈಮಾಚಲೋಪಮಂ ಬೆಳೆದು ನಿಂದಿರೆ ಕರ್ಮ
ಒಂದೆ ಜನ್ಮದಲದನು ಸವೆಸಲಹುದೇ ಗುರುವೆ?

ಬುದ್ಧ

ಆನಂದ. ಹಿಡಿಯುಪ್ಪು ಬಟ್ಟಲಿನ ನೀರನ್ನು
ಉಪ್ಪುಉಪ್ಪಾಗಿಸುತೆ ನಾಲಗೆಯ ಮುಟ್ಟಬಾ-
ರದ ತೆರದಿ ಗೈವ ಶಕ್ತಿಯನು ಪಡೆದಿಹುದು: ಸರಿ,
ಆದರದ, ನೀ ಗಂಗೆಗೆಸೆದರೋ ಕರಗಿಸುತ

ಹರಿಯುವಳು. ಅಂತೆಯೇ ನಿರ್ವಾಣದಾನಂತ
ಸುಪ್ತಸಾಗರಕಿಹುದು ಎನಿತೊ ಹೈಮಾಚಲವ
ಗರ್ಭದಲಿ ಹುದುಗಿಸುತೆ ಎದೆಯ ಬಡಬಾಗ್ನಿಯಿಂ
ಹೆಸರಳಿಸಿ ಸಂಗಮಂಗೈಯುವಾ ಶಕ್ತಿ !

ಅಂಗುಲೀಮಾಲ

ಅರಿವು ದೊರಕಿತು ತಂದೆ. ನನ್ನ ಸಂಶಯಕೆಂದೆ
ಉತ್ತರವ ನೀನಿತ್ತೆ. ಪೇಳ್ ಗುರುವೆ, ಇನ್ನೆನಗೆ
ಕಜ್ಜವೇಂ ? ನಿನ್ನಾಣತಿಯ ಪಥದಿ ನಡೆವುದೇ
ಇನ್ನೆನಗೆ ಪರಮ ನಿಶ್ಶ್ರೇಯಸಂ.

ಬುದ್ಧ

(ತುಸುಹೊತ್ತು ಮೌನದಿಂದ ಧ್ಯಾನಿಸಿ)

ಕರ್ಮಫಲದನುಭವವು ಪೂರ್ಣವಾಗುವ ಮುನ್ನ
ನಿಜಶಾಂತಿ ದೊರೆಯದೈ. ಅದರಿಂದೆ ಕೆಲಕಾಲ
ಹಳ್ಳಿಹಳ್ಳಿಯ ಸುತ್ತಿ ನಗರಗಳ ಸಂಚರಿಸಿ
ಹಿಂದಿರುಗು. ಒಳಿತು ಕೆಡಕುಗಳೆಲ್ಲ
ಒಂದೆಸಮ ಎಂಬುದನು ಮರೆಯದಿರು.
ನಿಂದೆ ಸುತಿಗಳು ಒಂದೆ. ಬೈಗಳಿನ ಸುರಿಮಳೆಯೊ,
ಅಮೃತಾನ್ನ ದಾನವೋ, ಪುಷ್ಪಪಥ ಗಮನವೋ
ಈಟಿಗಳ ತಿವಿತವೋ ಒಂದೆ ಸಮ ಎಂಬುದನು
ಮರೆಯದಿರು. ಸಮತೆ ಹೃದಯದ ಶಕ್ತಿ. ಮೇಣದೇ
ಮುಕ್ತಿಪಥದೂರೆಗೋಲ್. ನಡೆ ಕಂದ ಶುಭಮಕ್ಕೆ !

ಅಂಗುಲೀಮಾಲ

(ಉಕ್ಕಿಬರುವ ಕಣ್ಣೀರನ್ನು ತಡೆಯಲು ಪ್ರಯತ್ನಿಸುತ್ತಾ)

ತಂದೆ, ತಂದೆ . . . ಉಳಿದು ನಿನ್ನನು ನಾನು
ನಡೆಯಲಾರೆ . . . ನೀನೆನ್ನ ಸರ್ವಸ್ವ.

ಬುದ್ಧ

ಅಭಿಮಾನಕಿಂತ ಹಿರಿ ಶತ್ರು ಬೇರಿಲ್ಲವೈ ಕಂದ.
ಮುಕ್ತಿಪಥಗಮನದಲಿ ಹಿರಿಯ ಆತಂಕವದೆ.
ಯಾರ ನೆರವನೂ ಬಯಸದೆಯೆ ನಡೆ ಕಂದ.
ಸಮೀರ ಸುಳಿವಂತೆ, ನಿನ್ನ ನೀ ನೆಮ್ಮಿ ನಡೆ. ಶುಭಮಕ್ಕೆ !

ಅಂಗುಲೀಮಾಲ

ಮತ್ತೆ ನಿನ್ನನು, ಅಂತೆ ಈ ಎಲ್ಲ ಅನಿಮಿತ್ತ
ಬಂಧುಗಳ ಕಾಂಬೆನೇ ತಂದೆ ?

ಬುದ್ಧ

ಕಾಂಬೆಯೆಂದೇ ತೋರುವುದು ಕಂದ.

ಅಂಗುಲೀಮಾಲ

ಇಂದಿನಿಂದೇಳು ದಿನಗಳು ನಾನು ಚರಿಸುವೆನು.
ಭಿಕ್ಷೆ ಬೇಳ್ಪುದ ಕಲಿವೆ. ಬಳಿಕ ಐತರುವೆ ನಾ.
ನೀನಿಲ್ಲೆ ಇರಬೇಕು ಕಲ್ಪತರುವೆ.

ಬುದ್ಧ

ಕರ್ಮಗತಿ ಅಂತಿರಲು ನಿನ್ನಿಚ್ಛೆ ಸಲ್ಲುವುದು.
ಪ್ರೇಮ ಭಿಕ್ಷೆಯು ನಿನ್ನ ಹೃದಯಕ್ಕೆ ಸಲ್ಲುವುದು.

(ಅಂಗುಲೀಮಾಲನೆದ್ದು ಬುದ್ಧಪದಕ್ಕೆ ಪ್ರಣಾಮ ಸಲ್ಲಿಸಿ ಹೊರಡುತ್ತಾನೆ. ನಿಧಾನವಾಗಿ ಕಣ್ಮರೆಯಾಗುತ್ತಾನೆ.)

ಆನಂದ

ಎಂಥ ಸೋಜಿಗವ ನಡೆಸಿದೆ ತಂದೆ. ಬೆಟ್ಟದೆದೆ-
ಯಿಂ ಪೊಣ್ಮಿ ವಿಲಯಸರ್ಜನಗೈವ ಲೋಹರಸ-
ಪೂರಕ್ಕೆ ತಂಪುಕಂಪುಗಳಿತ್ತು ನಲಿನಲಿದು
ಬುಗ್ಗೆಚಿಮ್ಮುವ ಚೆಲುವು ಕಾರಂಜಿಯಾಗಿಸಿದೆ.

ಬುದ್ಧ

ಮಾಣ್‌ಕಂದ. ಅವನೆ ಸೋಜಿಗಕಾರ. ನಿಸ್ಸತ್ವ-
ವೆಂದು ಜಗ ಬಗೆದ ಆ ಪ್ರೇಮಕ್ಕೆ ತನ್ನೆದೆಯ
ತ್ಯಾಗದಿಂ ಸತ್ವ ನೀಡಿದ ಜಸಕೆ ಪಾತ್ರನವ.
ಅಚ್ಚರಿಯು ಜಗದಂದ ಆನಂದ. ಮರುನೆಲದ
ಮಧ್ಯದಲಿ ತಿಳಿನೀರ ಬುಗ್ಗೆಯಿದೆ. ಒಡಲೆಲ್ಲ
ಜಲವಾದ ವಾರಿಧಿಯ ಕಣಕಣವು ಉಪ್ಪೋ ಉಪ್ಪು!
ಸಾಕು ಕಂದ. ನೀವೆಲ್ಲ ಧ್ಯಾನದಲಿ ತೊಡಗುವುದ
ಕಾಂಬಾಸೆ ನನಗಾಯ್ತು.

ಎಲ್ಲರು

ಬುದ್ಧಂ ಶರಣಂ ಗಚ್ಛಾಮಿ;
ಸಂಘಂ ಶರಣಂ ಗಚ್ಛಾಮಿ;
ಧಮ್ಮಂ ಶರಣಂ ಗಚ್ಛಾಮಿ.

(ಎಂದು ಹೇಳಿ ಎಲ್ಲರೂ ಧ್ಯಾನಕ್ಕೆ ಕುಳಿತುಕೊಳ್ಳುತ್ತಾರೆ. ತೆರೆ)

## ದೃಶ್ಯ ೫

(ಏಳು ದಿನಗಳ ಬಳಿಕ. ಜೇತವನದಲ್ಲಿ ಬುದ್ಧದೇವ ಶಿಷ್ಯರೊಡನೆ ಮಾತನಾಡುತ್ತಿದ್ದಾನೆ)

ಆನಂದ

ಎದೆತುಂಬ ಆನಂದ. ಧ್ಯಾನದೇಕಾಗ್ರತೆಯ
ಸಾನಂದದನುಭೂತಿ ಎದೆಯ ತುಂಬಿದೆ ತಂದೆ.
ಅರಿವಿನಾಚೆಗೆ ಇರವು. ಇರವಿನಾಚೆಗೆ ಬಯಲು.
ಇದು ಮನದ ಭ್ರಾಂತಿಯೋ ಮೇಣ್ ಅಂತ್ಯಶಾಂತಿಯೋ
ಒಂದು ತಿಳಿಯದ ಮರುಳು ನಾನಾಗಿಹೆನ್.

ಬುದ್ಧ

ದಿಟ ಕಂದ. ಇದೊ ನೋಡು, ಮುಂಜಾನೆ ಬಿಸಿಲಿನಲಿ
ಮಿಂದು ಕಿಲಕಿಲನಕ್ಕು ಲಾಸ್ಯವಾಡಿಹ ಲತೆಯ
ತುದಿಯಲ್ಲಿ ಅರಳಿರುವ ಸುಂದರ ಸುಪುಷ್ಪದೊಲು
ಧ್ಯಾನಾಗ್ರದಲಿ ಅರಳುವುದು ಅನಂತಶಾಂತಿ.

ಒಬ್ಬ ಶಿಷ್ಯ

ಅಂಗುಲೀಮಾಲನೈತರುವ ದಿನವಿದಲ್ಲವೆ
ತಂದೆ ?

ಬುದ್ಧ

ಬರಬಹುದು ಕಂದ.

ಮತ್ತೊಬ್ಬ ಶಿಷ್ಯ

ಗುರುದೇವ. ರಾಜಗೃಹದತ್ತಣಿಗೆ ತೆರಳುವೆವು
ನಾಳೆ ನಾವೆಂದೆಂಬ ಆಣತಿಯನಿತ್ತಿಹಿರಿ.
ಇಂದು ನೆನಪಾಗಿಸಲು ಹೇಳಿದಿರಿ.

ಬುದ್ಧ

ಒಳಿತು ಕಂದ. ನಾಳೆ ಮುಂಜಾನೆ ರವಿಯುದಯಕಿಂ
ತುಸ ಮುನ್ನ ಧ್ಯಾನವನು ಮುಗಿಸುತ್ತೆ ಇಲ್ಲಿಂದ
ತೆರಳೋಣ.

(ಅಷ್ಟರಲ್ಲಿ ಒಬ್ಬ ಶಿಷ್ಯ ಓಡೋಡಿ ಬರುತ್ತಾನೆ)

ಶಿಷ್ಯ

ಗುರುದೇವ . . . ಗುರುದೇವ.

ಬುದ್ಧ

ಪೇಳ್ ಕಂದ.

ಶಿಷ್ಯ

ಅಂಗುಲೀಮಾಲ ಅಂಗುಲೀಮಾಲ . . .

ಬುದ್ಧ

ಶುಭಮಕ್ಕೆ. ಆದರೇತಕೀ ಉದ್ವೇಗ?

ಶಿಷ್ಯ

ತಂದೆ, ಆತನ್ . . . ಆತನ್.

ಬುದ್ಧ

ಆತನೇನಾಗಿಹನ್? ನುಡಿ.

ಶಿಷ್ಯ

(ಒಂದೇ ಉಸುರಿಗೆ)

ರಕ್ತದಲಿ ಮಿಂದಿಹನ್, ವಿಕೃತಾಂಗನಾಗಿಹನ್.
ದಾರಿಹೋಕರದಾರೊ ಆಸರೆಯ ನೀಡಿರಲ್
ಕರುಳು ತತ್ತರಿಪಂತೆ ನರಳುತ್ತ ಬರುತಿಹನ್.

(ಎಲ್ಲರೂ ಅಯ್ಯೋ ಎಂದು ನರಳುತ್ತಾರೆ)

ಬುದ್ಧ

ಏತಕೀ ಉದ್ವೇಗ? ದುರ್ವಾರ ಕರ್ಮಗತಿ.
ಕರ್ಮ ಶಕಟದ ಲೋಹ ಚಕ್ರಕ್ಕೆ ತಲೆಯೊಡ್ಡಿ
ನೋವಿಲ್ಲದಿರಬಹುದೆ? ಒಡಲೊಡನೆ ಜನಿಸಿದಾ
ಕರ್ಮ ಕವಚವ ಹರಿದು ಕಿತ್ತೆಸೆದು ಬರುವಂದು
ಒಂದಿನಿತು ರಕ್ತವುಕ್ಕಲ್ಕೇಕೆ ಉಬ್ಬೆಗವೊ!
ಅವನಿನ್ನು ನಿರ್ಮುಕ್ತ. ಪುಣ್ಯಾಕ್ಷನೆಂದೆಂದು!

(ಇಷ್ಟರಲ್ಲಿ ಇಬ್ಬರು ದಾರಿಹೋಕರನ್ನು ನೆವ್ಮಿ ನರಳುತ್ತ ಅಂಗುಲಿಮಾಲ ಪ್ರವೇಶಿಸುತ್ತಾನೆ)

ಅಂಗುಲೀಮಾಲ

ಎಲ್ಲಿ? . . . ನನ್ನ . . . ಆ . . . ತಂದೆಯೆಲ್ಲಿ?
ಎದೆಗಪ್ಪಿ ನಲಿದ ಆ . . . ಮಾತೆಯೆಲ್ಲಿ?
ಮಂಗಳದ . . . ಕಂದೆರೆದ ಆ . . . ಗುರುವದೆಲ್ಲಿ?
ನನ್ನೆದೆಯ . . . ನೆಚ್ಚರಿಸಿ ಅರಿವ ಬೆಳಕನು ತಂದ
ರವಿದೇವನೆಲ್ಲಿ . . .?

ಬುದ್ಧ

ಇದೊ ಇಲ್ಲಿ . . . ಬಾ ಕಂದ.

(ಎಂದು ಹೇಳಿ ಪೀಠದಿಂದೆದ್ದು ಅಂಗುಲೀಮಾಲನ ಬಳಿಗೆ ಬರುತ್ತಾನೆ. ಅಂಗುಲೀಮಾಲ ಬುದ್ಧನ ಪಾದದಡಿ ಕುಸಿಯುತ್ತಾನೆ. ಬುದ್ಧ ಅಲ್ಲೇ ನೆಲದ ಮೇಲೆ ಕುಳಿತು ಅಂಗುಲೀಮಾಲನ ತಲೆಯನ್ನು ತೊಡೆಯಮೇಲಿಟ್ಟುಕೊಳ್ಳುತ್ತಾನೆ)

ಬುದ್ಧ

ಏನಿದಂಗುಲಿಮಾಲ? ಏನಾಯ್ತು ಪುಣ್ಯಾಕ್ಷ?

ಅಂಗುಲೀಮಾಲ

ನೀರು . . . ತಂದೇ . . . ನೀರು.

ಬುದ್ಧ

ಆನಂದ. ಕಮಂಡಲನು ತಾ.

(ಆನಂದ ಕಮಂಡಲನ್ನು ತಂದು ಬುದ್ಧನ ಕೈಗೆ ಕೊಡುತ್ತಾನೆ. ಬುದ್ಧದೇವ ಅಂಗುಲೀಮಾಲನ ಬಾಯಿಗೆ ನೀರನ್ನು ಹಾಕುತ್ತಾನೆ.)

ಅಂಗುಲೀಮಾಲ

ಬದುಕಿದೆನೊ ತಂದೆ, ತವ ಕೃಪೆಯಿಂದೆ
ಓ ನಿನ್ನ ಕರುಣೆಯ ತೆರದಿ ಅಮೃತೋಪಮಂ
ಈ ಜಲಂ !

(ಅಷ್ಟರಲ್ಲಿ ಉಳಿದ ಶಿಷ್ಯರು ಸುತ್ತ ನೆರೆದು ಅವನ ಗಾಯಗಳನ್ನು ತೊಳೆದು ಮದ್ದು ಹಾಕಿ ಬಟ್ಟೆ ಕಟ್ಟುತ್ತಾರೆ.)

ಬುದ್ಧ

ಪೇಳ್ ಕಂದ, ಪುಣ್ಯಾಕ್ಷ. ಏತಕೀಪರಿಯಾಯ್ತು,
ಹಗೆಯು ಹೊಗೆಯಾಡಿತೇ ? ಜನ ನಿನ್ನ ಹೊಡೆದರೇ ?
ಪುಣ್ಯಾಕ್ಷ. ಒಂದೆ ಕಣ್ ನೋಡುತಿದೆ. ಮತ್ತೊಂದಕೇನಾಯ್ತು ?

ಆನಂದ

ಗುರುದೇವ, ತಲೆಯೊಡೆದು ಮತ್ತಿದೋ
ಸೋರುತಿದೆ ರಕುತ.

ಬುದ್ಧ

ಮತ್ತಷ್ಟು ಮದ್ದತಾ ಇಲ್ಲಿ ಆನಂದ.

(ಆನಂದ ತಂದ ಮದ್ದನ್ನು ತಾನೇ ಅಂಗುಲೀಮಾಲನ ತಲೆಯೊಡೆದ ಭಾಗಕ್ಕೆ ಹಾಕಿ ಕಟ್ಟುತ್ತಾ)

ಒರೆ ಕಂದ. ಏಕೆ ಹಿಂಜರಿಯುತಿಹೆ !

ಅಂಗುಲೀಮಾಲ

ಏನನೊರೆಯಲಿ ತಂದೆ? ಜನ ಬಡಿದರೆನ್ನಲೇ?
ಅದು ಸುಳ್ಳು. ಜನಪದದ ಬಂಧುಗಳಿಗಾನಿತ್ತ
ಕಾಣಿಕೆಯ ಇಂದು ಹಿಂತಿರುಗಿ ನೀಡಿದರವರು.
ಒಳಿತೆಂದು ಸ್ವೀಕರಿಸಿ ಬಂದಿಹೆನು.

ಬುದ್ಧ

ಎಲ್ಲರೂ ಅರಿವಂತೆ ನುಡಿ ಕಂದ. ಏನಾಯ್ತು.

ಅಂಗುಲೀಮಾಲ

ಏನು ಆಗಲೆ ಇಲ್ಲ. ನೀನಿತ್ತಪಾತ್ರೆಯನು
ಹಿಡಿದು ಭಿಕ್ಷಕೆ ನಡೆದೆ. 'ಭಿಕ್ಷೆ ತಾಯೀ' ಎಂದೆ.
ನಾನಂದು ಖಡ್ಗಕಾಳಿಯ ಹೊತ್ತು ನಡೆದಂದು
ಎಂತೊ ಮೂರ್ಛೆಗೆ ಸಲದೆ ಅಂತಿಂತು ಉಳಿದವರು
ಗುರುತಿಸುತೆ ನನ್ನನ್ನು, ಮೇಲೆವಾಯುತೆ ಬಂದು
ಕೈಗೆ ಸಿಕ್ಕಿದ ಕೊಡಲಿ ಕುಡುಗೋಲುಗಳ ತಂದು
ಕಣ್ಣುಕಿವಿಗಳ ಲೆಕ್ಕಿಸದೆ, ನಡುನಡುವೆ ಶಪಿಸುತ್ತ,
ಹೇರಿದರು.

ಬುದ್ಧ

ಸುಮ್ಮನಿದ್ದೆಯ ಆಗ?

ಅಂಗುಲೀಮಾಲ

ಇಲ್ಲ. ಪೆಟ್ಟು ಪೆಟ್ಟಿಗು, 'ಜಯಬುದ್ಧಗುರುದೇವ'
'ಜಯ ಬುದ್ಧ ಗುರುದೇವ' ಎನುತಿದ್ದೆ. ಓ ಪಾಪ,
ಅದು ತಾನೆ ಏನೇಟು! ನಾಗೈದ ಕರ್ಮವನು
ನೆನೆಯುತಿರೆ ಅದರ ಮುಂದಿದು ಅಲ್ಪ ಶಿಶು.
ಒಂದೊಂದು ಘಾತಕೂ ಮೈಯುಬ್ಬುತಿತ್ತು,
ಎದೆ ನಲಿಯುತಿತ್ತು.

ಸುತ್ತಲೂ ಉನ್ಮತ್ತ ರವ, ನಡುವೆ ಘಾತಗಳ ಮಾಲೆ.
ಸಂತೆ ಮಂದಿಯ ನಡುವೆ ನಿಂತು ನೋಡುವ ಶಿಶುವ
ಹೋಲಿದ್ದೆ. ಕೊಟ್ಟ ಕೊನೆಯಾಘಾತ. ಅಪೂರ್ವ-
ದನುಭೂತಿಯನು ಉಸುರಲಾರದೆ ಎದೆಯು ತ-
ಲ್ಲಣಿಸುತಿದೆ, ಬಿಕ್ಕುತಿದೆ. ಕೊಟ್ಟ ಕೊನೆಯಾಘಾತ!
ನನ್ನ ಸಹ್ಯದ ಮುಖಕೆ ಕನ್ನಡಿಯ ಹಿಡಿದ ತೆರ
ದೈತ್ಯರೂಪಿನ ನರನು ಕೈಯ ಕೊಡಲಿಯನೆತ್ತಿ
ತಲೆಯ ಮೇಲಿಳುಹಿದನ್. "ಜಯ ಬುದ್ಧ ಗುರು" ಎಂದೆ;
ತಲೆ ಸುತ್ತಿ ಒರಗಿದೆನ್. ಒರಗಿದೆನ್ ಒಳಿತಕ್ಕೆ.
ಎದೆಯ ಕದ ಒಡೆದುದಯ್. ಉಕ್ಕಿ ಹರಿಯಿತು ಕಡಲು:
ಹನಿಯೆಲ್ಲ ಹಾಲು. ತೆರೆಯೆಲ್ಲ ಜೇನು!
ಸವಿದೆನೋ ನಾ ಸವಿದೆ, ಎಲ್ಲೆಯಿಲ್ಲದೆ ಸವಿದೆ.
ಮುಳುಮುಳುಗಿ ಮೇಲೆದ್ದು ತೆರೆತೆರೆಯಲೀಸಾಡಿ
ಮತ್ತೆ ಮತ್ತದನೆ ಸವಿದೆ. ಓ, ಮತ್ತದೋ
ಉಕ್ಕಿ ಬರುತಿದೆ ಕಡಲು, ಹನಿ ಹನಿಯು ಮುತ್ತಾಗಿ,
ಮುತ್ತು ಹಾಲ್ ಮುತ್ತಾಗಿ, ಹಾಲ ಹಿಂಗಡೆ ಜೇನು
ಜೇನ ಹಿಂಗಡೆ ಹಾಲು ಹರಿದು ಬರುತಿದೆ ತಂದೆ,
ಉಕ್ಕಿ ಬರುತಿದೆ ತಂದೆ, ನಾ ಮಿಂದೆನೋ ಮಿಂದೆ.

ಬುದ್ಧ

ನೀ ಧನ್ಯನೈ ಕಂದ, ಎಲ್ಲರಿಗು ಸುಲಭದಲಿ
ದೊರೆಯದೀ ಆನಂದ.

(ಎಂದು ಉತ್ತರೀಯದಿಂದ ಗಾಳಿ ಹಾಕುತ್ತಾನೆ)

ಅಂಗುಲೀಮಾಲ

(ಕ್ಷೀಣಸ್ವರದಲ್ಲಿ)

ಎಲ್ಲರಿಗು ಸುಲಭದಲಿ ದೊರೆಯದೀ ಆನಂದ!
ಬುದ್ಧನಂಕದಲಿ ತಲೆಯಿಟ್ಟು ನಿದ್ರಿಪಾನಂದ!

ಬುದ್ಧಕರ ಸಂಸ್ಪರ್ಶದಮೃತ ಮಧುರಾನಂದ!
ಬುದ್ಧ ವಸ್ತ್ರಾಂಚಲದ ಮಲಯಾನಿಲಾನಂದ!
ಎಲ್ಲರಿಗು ಸುಲಭದಲಿ ದೊರೆಯದೀ ಆನಂದ!
ಧನ್ಯ ನಾನ್.
ತಂದೆ . . . ಇನ್ನಿನಿತು ನೀರ್ . . .

(ಬುದ್ಧದೇವ ಅವನಿಗೆ ಮತ್ತಷ್ಟು ನೀರನ್ನೆರೆಯುತ್ತಾನೆ)

ಬುದ್ಧ

ನೀನಿನ್ನು ನುಡಿಯದಿರು ಪುಣ್ಯಾಕ್ಷ, ಬಳಲಿರುವೆ.

ಅಂಗುಲೀಮಾಲ

ಎರಡು ನುಡಿ ನುಡಿಯುವೆನ್ ನುಡಿಯಲಾರೆನು ಬಳಿಕ;
ಓ ತಂದೆ ನೀನಂದು ಬಂದಂದು "ನೀನಿನ್ನು
ನಿಂತಿಲ್ಲ, ನಿಂತೆ ಇರುವೆನು ನಾನು" ಎಂದೊರೆದೆ.
ಉಸಿರು ಹಾರುವ ಮುನ್ನ ಅದರರ್ಥವನು ಅರಿವ
ಬಯಕೆಯಾಗಿದೆ ನನಗೆ!

ಬುದ್ಧ

ಕಂದ ಅದು ಮುಗಿದ ಕತೆ; ಕರ್ಮಚಕ್ರಕೆ ಸಿಲುಕಿ
ಸುತ್ತುತಲೆ ನೀನಿರುವೆ ಎಂದೆಂದೆ. ಇಂದಿನಾ
ಪರಿ ಬೇರೆ. ನೀನದನು ಮುಗಿಸಿರುವೆ,
ನಿಲುಗಡೆಯನೈದಿರುವೆ.

ಅಂಗುಲೀಮಾಲ

ಕರುಣಾಳು, ಗುರುದೇವ. ಜನರೇಕೆ ಕಣ್ಣೊಂದ
ಉಳಿಸಿದರೊ ಎಂದಾನು ಚಿಂತಿಸುತಲಿದ್ದೆ. ಅರಿ-
ವಾಗುತಿದೆ ಈಗ. ನಿನ್ನ ಮುಖದರ್ಶನವ ಮಾಡುತ್ತ

ಮಾಡುತ್ತ ಪರಮ ವಿಶ್ರಾಂತಿಯನು ಪಡೆವ ಭಾ-
ಗ್ಯವನಿತ್ತು ಪುಣ್ಯಾತ್ಮರುಳುಹಿದರು.

ಬುದ್ಧ

ಹಾಲ ತಾ ಆನಂದ.

(ಆನಂದ ತರುತ್ತಾನೆ ನಿಧಾನವಾಗಿ ಹಾಲೂಡುತ್ತಾ)

ಕುಡಿ ಕಂದ. ಚೇತರಿಸಿಕೋ ಈಗ. ಬಳಿಕ ನುಡಿ.

ಅಂಗುಲೀಮಾಲ

ನಿನ್ನ ಕಣ್ಣಿದೊ ತಂದೆ, ತಾಯೆದೆಯ ತೆರದಲ್ಲಿ
ಹಸಿರು ಬಯಲಾಗುತಿದೆ; ಅದೊ ನಾನು ಎಳೆಶಿಶುವು.
ಬಾ ಆಟವಾಡುವಂ . . . ನೀನಾರು ಧವಳಾಂಗ!
ಓಮರೆತೆ, ಕೆಳೆಯನ್ನೆ.
ಹಸಿರು ಬಯಲಾಟ ಸಾಕಾಯ್ತು ಬಾ—
ಅದೊ ಕಡಲ್ ಮೊರೆಯುತಿದೆ. ಉಕ್ಕಿ ಹರಿಯುತಿದೆ.
ಬಾ ಗೆಳೆಯ ಬಾ. ತೆರೆಯ ಕುದುರೆಯನೇರಿ
ಸುತ್ತೋಣ ಬಾ. ಬಾ ಕೆಳೆಯ ಅದೊ ಕಡಲ್ . . .

(ಹೀಗೆ ಹೇಳುತ್ತಾ ಕಣ್ಣುಮುಚ್ಚುತ್ತಾನೆ. ತಲೆ ಕುಸಿಯುತ್ತದೆ)

ಬುದ್ಧ

(ಸುತ್ತಲೂ ನೋಡಿ)

ಆನಂದ, ಸೋದರರೆ, ಏಕೆ ಕಂಬನಿ ಮಾಲೆ?
ಬಗೆ ಮುಗುಳ ಮಾಲೆಯಂ ಮೇಣ್ ಜಗದ ಪೂಜೆಯಂ
ಕೈಕೊಳುವ ಪುಣ್ಯಭಾಜನ ಮೂರ್ತಿಗಿಂತೇಕೆ
ಅಶ್ರುಮಾಲೆ ಸಮರ್ಪಣಂ?

(ಏಳುತ್ತಾ)

ಇವನಂತ್ಯ ಕರ್ಮಕ್ಕೆ ಅಣೆಮಾಡಿ.

**ಆನಂದ**

ನಿನ್ನ ಕರುಣಾನಿಳನ ಪುಣ್ಯ ಸಂಸ್ಪರ್ಶನದಿ
ಜಾಲಿತರು ಚಂದನದ ಮರವಾಯ್ತು. ಕೆತ್ತಿದರು
ಕಂಪನೇ ಸೂಸಿತ್ತು. ಇಂದೀಗ ತನ್ನನೇ
ತಾ ದಹಿಸಿ ಜಗಕಿದಿಗೊ ಸಾರಲಿದೆ
ಸಲುಮೆ ಸಂದೇಶಮಂ.

**ಬುದ್ಧ**

ಶುಭಮಕ್ಕೆ, ಸೊಗಮಕ್ಕೆ, ಧರ್ಮಕ್ಕೆ ಮಂಗಳಂ.

(ತೆರೆ ನಿಧಾನವಾಗಿ ಬೀಳುತ್ತವೆ ಕೊನೆಗೆ ಈ ಹಾಡು ಕೇಳಿಸುತ್ತದೆ)

ಒಲುಮೆಗೆ ಕೆಳೆ ಸಲುಮೆಗೆ ಕೆಳೆ
ಹಗೆಗೂ ಕೆಳೆ ಆವನ ಶ್ರೀಚರಣಂ,
ಸ್ಪರ್ಶದಿ ಬಗೆ ದಳಪರಳಿಪ
ಮಂದಸ್ಮಿತ ಸುಮನೋಜ್ವಲಕಿರಣಂ,
ಮುಗಿಲಂಚಿನ ಬಗೆಯೆತ್ತರ-
ದಿಂದೀ ಬುವಿ ಮುಟ್ಟುವವಂ,
ಜಗಬಿತ್ತರ ಮುಗಿಲೆತ್ತರ
ಸ್ವರ್ಮಾಡವ ಕಟ್ಟುವವಂ,
ಚೈತನ್ಯದ ಮಂದಾನಿಲ-
ನೊಲು ಜಗವಂ ಸುತ್ತಿರುವಂ,
ಆ ಬುದ್ಧಗೆ ಶ್ರೀ ಶುದ್ಧಗೆ
ಬದ್ಧಾತ್ಮರ ಬುವಿ ಬಾಳಿಸ ಹರಣಂ
ಇದೊ ಶರಣಂ.

ಓಂ ಶಾಂತಿಃ ಶಾಂತಿಃ ಶಾಂತಿಃ